# ಮಹಾತ್ಮರ ಮರಣ

## ಮತ್ತು ಇತರ ಉಪನ್ಯಾಸಗಳು

ಜಿ. ಪಿ. ರಾಜರತ್ನಂ

ಹಿಂದ್ ಕಿತಾಬ್ಸ್ ಲಿಮಿಟೆಡ್
ಬೊಂಬಾಯಿ : ಬೆಂಗಳೂರು

ಮೊದಲನೆಯ ಮುದ್ರಣ :
೨, ಅಕ್ಟೋಬರ್, ೧೯೪೮

ಬೆಲೆ
ಒಂದು ರೂಪಾಯಿ ನಾಲ್ಕಾಣೆ

**ಬೆಂಗಳೂರಿನ ಬಿ. ಬಿ. ಡಿ. ಪವರ್ ಪ್ರೆಸ್ಸಿನಲ್ಲಿ**
ಯು. ನರಸಿಂಹ ಮಲ್ಯರಿಂದ ಮುದ್ರಿತವಾಯಿತು

**ಹಿಂದ್ ಕಿತಾಬ್ಸ್ ಲಿಮಿಟೆಡ್ (ಬೊಂಬಾಯಿ)**
೧೧, ಜವಾಹರಲಾಲ್ ರಸ್ತೆ, ಶೇಷಾದ್ರಿಪುರ, ಬೆಂಗಳೂರು ೪
ಇವರಿಂದ ಪ್ರಕಟವಾಯಿತು

# ಬಿನ್ನಹ

ಕಳೆದ ವರ್ಷ ಭಾರತಕ್ಕೆ ಸ್ವಾತಂತ್ರ್ಯ ಬಂದಾಗಲೂ ಗಾಂಧಿಯವರು ಮರಣಹೊಂದಿದಾಗಲೂ ನಡೆದ ಕೆಲವು ಸಾರ್ವಜನಿಕ ಸಭೆಗಳಲ್ಲಿ ಭಾಗಿಯಾಗಬೇಕೆಂದು ಮಿತ್ರರು ಕೆಲವರು ನನ್ನನ್ನೂ ಕರೆದರು. ಆ ಅವಕಾಶಗಳನ್ನು ಉಪಯೋಗಿಸಿಕೊಂಡು, ನನ್ನ ಮನಸ್ಸಿಗೆ ನೆಮ್ಮದಿ ತಂದಿರುವ, ನನ್ನನ್ನು ಈ ಸ್ವಲ್ಪಮಟ್ಟಿಗಾದರೂ ಕಾರ್ಯಪರನಾಗುವ ಹಾಗೆ ಮಾಡಿರುವ ಹತ್ತಾರು ಆಪ್ತವಾಕ್ಯಗಳನ್ನು ಅವಲಂಬನವಾಗಿ ಮಾಡಿಕೊಂಡು, ಆ ಸಂದರ್ಭಗಳಿಗೆ ತಕ್ಕ ಹಾಗೆ, ನನ್ನ ಅನುಭವಗಳಿಗೆ ಮುಟ್ಟಿದಷ್ಟು ಅರ್ಥವನ್ನು ಹೇಳಿಬಂದೆ. ಆ ಅಲ್ಲಲ್ಲಿ ಮಾತನಾಡಿ ಬಂದುದರಲ್ಲೇ ಕೆಲಕೆಲವು ಭಾಗಗಳನ್ನು ಆಯ್ದು ಬರೆದು ತಿದ್ದಿ ಕೆಲವು ಪತ್ರಿಕೆಗಳ ಸಹಾಯದಿಂದ ಪ್ರಕಟಿಸಿದ್ದೂ ಆಯಿತು.

ಈಗ ಆ ಲೇಖನಗಳ ಜೊತೆಗೆ ಹೊಸದಾಗಿ ಇನ್ನೊಂದೆರಡನ್ನು ಬರೆದು, ಈ ವರುಷದ ಗಾಂಧೀ ಜಯಂತಿಯ ಸಂದರ್ಭದಲ್ಲಿ ಪ್ರಕಟಿಸುತ್ತಿದ್ದೇನೆ.

ಇದರೊಳಗಿನ ಲೇಖನಗಳಿಗೆ ಅವಕಾಶಕೊಟ್ಟ 'ಜೀವನ', 'ಕೊರವಂಜಿ', 'ಪ್ರಜಾಮತ', 'ವಿಶ್ವಕರ್ಣಾಟಕ' ಪತ್ರಿಕೆಗಳಿಗೂ ನಾನು ಕೃತಜ್ಞನಾಗಿದ್ದೇನೆ.

೨—೧೦—೧೯೪೮
ಮಲ್ಲೇಶ್ವರ

**ಜಿ. ಪಿ. ರಾಜರತ್ನಂ**

# ವಿವರ

# ಸಾವು ನಿಜವಾದ ಸ್ನೇಹಿತ

(ಸೇವಾಗ್ರಾಮದ ಹಿಂದೂಸ್ತಾನಿ ತಾಲಿಮಿ ಸಂಘದ ಉಪಾಧ್ಯಾಯರೊಬ್ಬರ ಮಗಳು ತೀರಿಕೊಂಡಾಗ, ಗಾಂಧಿಯವರು ತಾವು ತೀರಿಕೊಳ್ಳುವುದಕ್ಕೆ ಹಿಂದಿನ ದಿವಸ ಬರೆದ ಪತ್ರ.)

ಹೊಸ ದೆಹಲಿ,
ಜನವರಿ, ೨೯, ೧೯೪೮.

ತಮ್ಮ ಶಂಕರನ್,

ಚಿ. ಕಿಶೋರಲಾಲ್ ನಿನ್ನ ಮಗಳು ಸುಲೋಚನಾ ಮರಣವಾದ ವಾರ್ತೆಯನ್ನು ತಿಳಿಸಿದ. ಅದರ ಬಗ್ಗೆ ನನಗೆ ಏನೂ ಕಲ್ಪನೆಯಿದ್ದಿಲ್ಲ. ನಾನು ನಿನಗೆ ಏನು ಬರೆಯಬಲ್ಲೆ? ನಾನು ಏನು ಸಮಾಧಾನ ಕೊಡಬಲ್ಲೆ? ಸಾವು ನಿಜವಾದ ಸ್ನೇಹಿತ. ದುಃಖವಾಗುವುದಕ್ಕೆ ಕಾರಣ, ನಮ್ಮ ಅಜ್ಞಾನ ಒಂದೇ. ಸುಲೋಚನೆಯು ಸತ್ತ್ವ ನನ್ನ ಇತ್ತು, ಈ ಹೊತ್ತು ಇದೆ, ನಾಳೆಯೂ ಉಳಿಯುತ್ತದೆ. ದೇಹ ಮಾತ್ರ, ಸಾಯಲೇಬೇಕು, ಅಲ್ಲವೆ. ಸುಲೋಚನಾ ತನ್ನಲ್ಲಿದ್ದ ಒಳ್ಳೆಯದನ್ನೆಲ್ಲಾ ಇಲ್ಲೇ ಬಿಟ್ಟು, ತನ್ನ ಲೋಪದೋಷಗಳನ್ನು ತನ್ನೊಡನೆ ತೆಗೆದುಕೊಂಡು ಹೋಗಿದ್ದಾಳೆ. ನಾವು ಅದನ್ನಾಗಲಿ ಅವಳನ್ನಾಗಲಿ ಮರೆಯದಿರೋಣ. ನಿಮ್ಮ ಕರ್ತವ್ಯವನ್ನು ಪಾಲಿಸುವುದರಲ್ಲಿ ಮೊದಲಿಗಿಂತ ಇನ್ನೂ ನಿಷ್ಠರಾಗಿರಿ.

ಇಂತು ಆಶೀರ್ವಾದಗಳು.

ಬಾಪೂ.

# ಮಹಾತ್ಮರ ಮರಣ

## ಮರಣವೆಂಬುದು ಮಾರಿಯಲ್ಲ, ಅದೇ ಪರಮಮಿತ್ರ.

೧

ಬೇಡಿದುದನೀವನೀಶ್ವರನೆಂಬ ನಚ್ಚಿಲ್ಲ
ಬೇಡಲೊಳಿತಾವುದೆಂಬುದರರಿವುಮಿಲ್ಲ
ಕೂಡಿಬಂದುದನೆ ನೀನ್ ಅವನಿಚ್ಛೆ ಎಂದುಕೊಳೆ
ನೀಡುಗೆದೆಗಟ್ಟಿಯನು—ಮಂಕುತಿಮ್ಮ

ಒಂದು ವರ್ಷಕ್ಕೆ ಹಿಂದೆ ದೇಶಕ್ಕೆ ಸ್ವಾತಂತ್ರ್ಯ ಬರುವಾಗ ಮನಸ್ಸಿಲ್ಲದ ಮನಸ್ಸಿನಿಂದಲಾದರೂ ಈ ಪುರಾತನ ದೇಶದ ವಿಭಜನೆಗೆ ನಾವೂ ಒಪ್ಪಿದೆವು. ಹಾಗೆ ಒಪ್ಪಿಗೆ ಕೊಡುವಾಗ, "ಹೊರಗಿನ ತೋರಿಕೆಗೆ ಒಂದು ಎಂಬ ಹಾಗಿದ್ದು, ಸುಮ್ಮನೆ ಒಳಗಡೆ ಸದಾ ನಾವು ಎರಡು ಬೇರೆ ರಾಷ್ಟ್ರ ಎಂದು ಕಾದುತ್ತಿರುವುದಕ್ಕಿಂತ, ಹೊರಗಿನ ಕಣ್ಣಿಗೆ ಎರಡು ಬೇರೆಯಾದರೂ ಇಬ್ಬರೂ ಸುಖಶಾಂತಿಗಳಿಂದ ನೆಮ್ಮದಿಯಾಗಿ ನಮ್ಮ ನಮ್ಮ ಪಾಡಿಗೆ ಇರಬಹುದು" ಎಂಬ ಒಳ್ಳೆಯ ಆಶಯದಿಂದಲೇ ಒಪ್ಪಿದೆವು. ಆದರೆ, ಆದ ಪರಿಣಾಮ ನಮ್ಮ ನಿರೀಕ್ಷೆಗಿಂತ ತೀರ ಭಿನ್ನವಾಯಿತು, ವಿಪರೀತವಾಯಿತು. ಜನಹಾನಿ, ಧನಹಾನಿ, ಮಾನಹಾನಿ ಎರಡೂ ಕಡೆ ವರ್ಣನೆಗೂ ಮೀರಿ ನಡೆದುಹೋಯಿತು. ನಾವು ಬೇಡಿದ್ದೇ ಒಂದಾಯಿತು, ನಮ್ಮ ಪಾಲಿಗೆ ಬಂದದ್ದೇ ಒಂದಾಯಿತು.

ಅದೇ ಈಗ ಮೊನ್ನೆ, ಹೈದರಾಬಾದಿನ ಮೇಲೆ ಇಂಡಿಯಾ ಸರಕಾರವು ಪೋಲೀಸ್ ಕಾರ್ಯಾಚರಣೆಯನ್ನು ಕೈಕೊಂಡಾಗ, ದೇಶವಿದೇಶಗಳಲ್ಲಿ ಎಲ್ಲ ಕಡೆಯೂ ಇದರ ಪರಿಣಾಮವನ್ನು ಕುರಿತು ಎಷ್ಟು ಕೆಟ್ಟದ್ದು ಎದುರು ನೋಡುತ್ತಿದ್ದರು? ಕಾಶ್ಮೀರದಲ್ಲಿ ಆಗಿರುವ ಹಾಗೆಯೇ ಎಷ್ಟು ದೀರ್ಘಕಾಲ ಹೀಗೆಯೇ ಎಳೆಯುತ್ತದೋ ಎಂದು ಎಷ್ಟು ಆತಂಕಪಡುತ್ತಿದ್ದರು? ಎಷ್ಟು ಜನ ಎಷ್ಟು ರಕ್ತದ ಕೋಡಿ ಹರಿದೀತೋ ಎಂದು ಒಳಗೊಳಗೆಯೇ ಬಯುಸುತ್ತಿದ್ದರು? ಆದರೆ ಆದದ್ದು? ಕೇವಲ ಕೆಲವೇ ದಿವಸಗಳಲ್ಲಿ, ಆದಷ್ಟು ಕನಿಷ್ಠಪ್ರಮಾಣದ ಜನಹಾನಿಯಲ್ಲಿ

ಹಿಡಿದ ಕಾರ್ಯ ಕೊನೆಕೂಡಲಿಲ್ಲಾ? ಇಲ್ಲಿಯೂ ಹೀಗೆಯೇ -- ಜನ ಬೇಡಿದುದೇ ಒಂದು, ಅವರ ಪಾಲಿಗೆ ಬಂದದ್ದೇ ಒಂದು.

ಕಣ್ಣು ತೆರೆದು ನಡೆಯುವವನಿಗೆ ಇಂತಹ ಅನುಭವಗಳು ಕ್ಷಣ ಕ್ಷಣಕ್ಕೂ ಕಂಡುಬರುತ್ತವೆ: ಈ ಪುರುಷನ ಎಣಿಕೆಯೇ ಒಂದು, ಆ ದೈವದ ಗಣಿತವೇ ಒಂದು. ಇದು ಎರಡನ್ನೂ ಸಮನ್ವಯಿಸಿ, ಅದರ ರಹಸ್ಯವನ್ನು ಭೇದಿಸಬೇಕೆಂದು ಎಂತೆಂತಹವರೋ ಪ್ರಯತ್ನಪಟ್ಟು, ಸಫಲರಾಗದೆ ಹೋಗಿದ್ದಾರೆ. ಕೊನೆಗೆ, ತಮ್ಮ ಕೈಮೀರಿದ ಆ ಕೊನೆಯದಕ್ಕೆ ಶರಣಾಗಿ, ಅದರ ಪಾದಸ್ಪರ್ಶವನ್ನೇ ಪರಮಪ್ರಸಾದವೆಂದು ಒಪ್ಪಿಕೊಂಡಿದ್ದಾರೆ.

ನಾವು ನಮಗೆ ಯಾವುದು ಒಳ್ಳೆಯದೆಂದುಕೊಂಡು ದೈವವನ್ನು ಬೇಡುತ್ತೇವೆಯೋ ಅದನ್ನು ಆ ದೈವ ಕೊಟ್ಟೇಕೊಡುವುದೆಂಬ ನಂಬಿಕೆಯಿಲ್ಲ. ಅದನ್ನು ದೈವ ಕೊಡುವವರೆಗೂ ಆತಂಕ ತಪ್ಪಿದ್ದಲ್ಲ. ಅದು ಕೊಡದೆ ಹೋದರಂತೂ ನಿರಾಶೆಯಿಂದ ಜೀವ ನಿಲ್ಲುವಂತಿಲ್ಲ.

ಅಥವಾ, ಒಂದುವೇಳೆ, ನಾವು ಕೇಳಿದ್ದನ್ನೇ ದೈವ ಕೊಟ್ಟೇತೆಂದು ಇಟ್ಟುಕೊಳ್ಳೋಣ. ಆ ಅದರಿಂದ ನಮಗೆ ಒಳ್ಳೆಯದಾಗುತ್ತದೋ ಇಲ್ಲವೋ ಅದೂ ನಮಗೆ ಗೊತ್ತಿಲ್ಲ. ಬೇಡಿದುದನ್ನು ಪಡೆದರೂ, ಪಡೆದದ್ದರಿಂದ ಒಳ್ಳೆಯದಾಯಿತೆಂಬುದನ್ನು ಅನುಭವಿಸಿ ಕಾಣುವವರೆಗೂ ಮನಸ್ಸಿಗೆ ನೆಮ್ಮದಿಯಿಲ್ಲ. ನಾವು ಒಳ್ಳೆಯದೆಂದುಕೊಂಡು ನಾವೇ ಕಾಡಿ ಬೇಡಿ ಪಡೆದದ್ದರಿಂದಲೇ ನಮಗೆ ಕೇಡಾಗುವುದಾದರೆ ನಮ್ಮ ಪಶ್ಚಾತ್ತಾಪದಲ್ಲೇ ನಾವು ಭಸ್ಮವಾಗಿಬಿಡುತ್ತೇವೆ.

ಹಾಗೆ ನಮಗೆ ಒಳ್ಳೆಯದು ಯಾವುದೆಂಬುದನ್ನು ನಾವು ತಿಳಿದು, ಅದನ್ನು ನಾವು ಕೇಳಿದಮಾತ್ರಕ್ಕೆ ಆ ದೈವ ಕೊಟ್ಟು, ಅದು ಕೊಟ್ಟುದರಿಂದ ನಮಗೆ ಒಳ್ಳೆಯದಾಗಿ—ಇದು ಆಗುವುದು ಎಷ್ಟು ದುಷ್ಕರವೆಂದರೆ —ಬುದ್ಧನು ಕೊಟ್ಟ ಒಂದು ಉಪಮಾನದಲ್ಲಿ ಬರುವ ಹಾಗೆ—ಮಹಾಸಮುದ್ರದಲ್ಲಿ ಓಡಿಯಾಡುವ ಎರಡು ಕಣ್ಣೂ ಕುರುಡಾದ ಒಂದು ಮುದಿಯ ಆಮೆ ಆ ಸಮುದ್ರದಲ್ಲಿ ತೇಲುವ ಒಂದು ನೊಗದ ಕಣ್ಣಿನೊಳಕ್ಕೆ ತನ್ನ ತಲೆಯನ್ನು ತೂರಿಸುವ ಹಾಗೆ, ತೀರ ಅಸಂಭವ.

ಆದ್ದರಿಂದ, ಬುದ್ಧಿವಂತನಾದವನು, ತನ್ನನ್ನು ದೈವದ ಕೈಗೆ ಒಪ್ಪಿಸಿಕೊಂಡು ತಾನು ಮಾಡುವ ಕೆಲಸವನ್ನು ನಿರ್ವಂಚನೆಯಿಂದ ಫಲಾಸಕ್ತಿಯಿಲ್ಲದೆ ಮಾಡುತ್ತಾ ಹೋಗುತ್ತಾನೆ: ಫಲ ಬರುವಕಾಲಕ್ಕೆ ಬಂದದ್ದು ಕಹಿಯಾಗಿರಲಿ, ಸಿಹಿಯಾಗಿರಲಿ, ಅದನ್ನು ಆ ದೈವ ಕೊಟ್ಟ ಫಲ ಎಂದು ಸಮತೆಯಿಂದ ಸ್ವೀಕರಿಸಿ, ತನ್ನ ಎದೆಯ ಗಟ್ಟಿಯನ್ನು ಕಾಪಾಡಿಕೊಂಡು, ತನ್ನ ಅಂತರ್ವಾಣಿಯ ಪ್ರೇರಣೆಯಂತೆ ತಾನು ಕೆಲಸಮಾಡುತ್ತಾ ಹೋಗುತ್ತಾನೆ.

ಈ ರೀತಿಯಾದ ಜೀವನದ ದರ್ಶನ ಬರಿಯ ಪುಸ್ತಕದ ಬದನೆಯ ಕಾಯಲ್ಲ. ಹೀಗೆ ಇದೇ ನಂಬಿಕೆಯಿಂದ ನೆಮ್ಮದಿಯಾಗಿ ಬದುಕಿದವರನ್ನು ಪುಸ್ತಕಗಳಲ್ಲಿಯೂ ಹಳೆಯವರ ಮಾತುಗಳಲ್ಲಿಯೂ ಕೇಳಿದ್ದೇವೆ. ಈ ಶತಮಾನದಲ್ಲಿ ಹುಟ್ಟಿ ಬೆಳೆಯುವ ಭಾಗ್ಯವನ್ನು ಪಡೆದವರು ನಾವು ಗಾಂಧಿಯವರ ಬದುಕಿನಲ್ಲಿ ಈ ದರ್ಶನವನ್ನು ಕಂಡಿದ್ದೇವೆ.

ಗಾಂಧಿಯವರೇನೋ ನೂರಿಪ್ಪತ್ತೈದು ವರುಷಗಳ ಕಾಲ ತಾವು ಬದುಕಬೇಕೆಂಬ ಇಚ್ಛೆ ತಮಗೆ ಇರುವುದಾಗಿ ಹೇಳುತ್ತಿದ್ದರು. ಅದರ ಜೊತೆಯಲ್ಲೇ, ದೈವ ಯಾವಾಗ ಏನು ಕೊಟ್ಟರೆ ಅದು ತಮಗೆ ಇಷ್ಟ ಎಂದೂ ಹೇಳುತ್ತಿದ್ದರು. ಸಾಯುವ ಆ ಶುಕ್ರವಾರ ಬೆಳಗಿನಿಂದ ಸಂಜೆಯವರೆಗೂ ಎಂದಿನಂತೆಯೇ ಕೆಲಸಕಾರ್ಯ ಮಾಡಿ, ಸಾಯುವ ಐದು ಹತ್ತು ನಿಮಿಷಕ್ಕೆ ಮೊದಲು ಕೂಡ ನಾಳೆಯ ಮುಂದಿನ ಕಾರ್ಯಗಳನ್ನು ಕುರಿತು ನಿಶ್ಚಯಿಸಿಕೊಂಡು, ಸಾವು ಸರ್ಪದಂತೆ ಬಂದು ಕುಟುಕಿದಾಗಲೂ ನಿಶ್ಚಿಂತೆಯಿಂದ ನಿರ್ವಿಕಾರರಾಗಿ 'ರಾಮ! ರಾಮ!' ಎಂದು ರಾಮ ನಾಮವನ್ನು ಜಪಿಸಿ, ಈ ದೇಹವನ್ನು ಬಿಟ್ಟುಹೋಗಲಿಲ್ಲಾ!

ಇಂತಹ ಅನಾಯಾಸದ ಮರಣ, ಇಂತಹ ಧೀರಮರಣ ಎಷ್ಟು ಜನರ ಪಾಲಿಗೆ ಬಂದೀತು! ಬಂದರೆ ಒಬ್ಬ ಬುದ್ಧ, ಒಬ್ಬ ಸಾಕ್ರಟೀಸ್, ಒಬ್ಬ ಯೇಸು, ಇಂಥವರ ಪಾಲಿಗೆ ಬಂದೀತು!

೨

ಭಗವಂತನಾದ ಬುದ್ಧನ ಕಡೆಯ ದಿನಗಳನ್ನು ಚಿತ್ರಿಸುವ ಒಂದು 'ಸೂತ್ರ' ಪಾಲೀಭಾಷೆಯಲ್ಲಿದೆ. ಅದನ್ನು 'ಮಹಾಪರಿನಿಬ್ಬಾನಸುತ್ತಂತ'

(ಮಹಾಪರಿನಿರ್ವಾಣ ಸೂತ್ರಾಂತ) ಎಂದು ಕರೆಯುತ್ತಾರೆ. ಅದರಲ್ಲಿ, ಬುದ್ಧನು ಪರಿನಿರ್ವಾಣಪಡೆದ ಸಮಯದಲ್ಲಿ ಸುತ್ತಿನವರ ಮೇಲೆ ಏನು ಪರಿಣಾಮವಾಯಿತು ಎಂಬುದನ್ನು ಹೀಗೆ ವರ್ಣಿಸಿದ್ದಾರೆ:

ತದಾಸಿ ಯಂ ಭಿಂಸನಕಂ ತದಾಸಿ ಲೋಮಹಂಸನಂ
ಸಬ್ಬಾಕಾರವರೂಪೇತೇ ಸಂಬುದ್ಧೇ ಪರಿನಿಬ್ಬುತೇ

ಸರ್ವಶ್ರೇಷ್ಠವಾದ ಆಕಾರದಿಂದ ಕೂಡಿದ ಸಂಬುದ್ಧನು ಪರಿನಿರ್ವಾಣ ಪಡೆದಾಗ, ಯಾವುದು ಭಯವನ್ನು ಉಂಟುಮಾಡುವುದೋ ಅದು ಆಯಿತು; ಮೈಯಲ್ಲಿ ಜುಮುಜುಮು ಎಂದು ರೋಮಾಂಚವಾಯಿತು— ಎಂಬ ಈ ಅಡಕವಾದ ಮಾತಿನ ಅಗಾಧತೆ ಅನುಭವವಾದದ್ದು, ಮೊನ್ನೆ ಮಹಾತ್ಮಾ ಗಾಂಧಿಯವರು ಮರಣಪಡೆದ ಸುದ್ದಿಯನ್ನು ಕೇಳಿದಾಗ.

ಇದರ ಹಾಗೆಯೇ, ಯೇಸುಕ್ರಿಸ್ತನು ಶಿಲುಬೆಯ ಮೇಲೇರಿ ತನ್ನ ಜೀವವನ್ನು ತನ್ನ ತಂದೆಯ ಕೈಗೆ ಒಪ್ಪಿಸಿದಾಗ, ಆ ಮಹಾಸಮಯದಲ್ಲಿ ಏನಾಯಿತು ಎಂಬುದನ್ನು ಮತ್ತಾಯನು ಬರೆದ ಸುವಾರ್ತೆಯು ಹೀಗೆ ವರ್ಣಿಸುತ್ತದೆ:

Jesus, when he had cried again with a loud voice yielded up the ghost.

And, behold, the veil of the temple was rent in twain from the top to the bottom; and the earth did quake, and the rocks rent;

And the graves were opened; and many bodies of the saints which slept arose,

And came out of the graves after his resurrection, and went into the holy city, and appeared unto many.

Now when the centurion, and they that were with him, watching Jesus, saw the earthquake, and those things that were done, they feared greatly, saying, Truly this was the Son of God.

ಯೇಸು ಸ್ವಾಮಿಯು ತನ್ನ ಜೀವವನ್ನು ಒಪ್ಪಿಸಿದಾಗ ದೇವಾಲಯದಲ್ಲಿ ಅಡ್ಡವಾಗಿದ್ದ ತೆರೆ ಬುಡದಿಂದ ತುದಿಯವರೆಗೂ ಇಬ್ಭಾಗವಾಗಿ ಸೀಳಿಹೋಯಿತಂತೆ. ಭೂಮಿ ನಡುಗಿತಂತೆ, ಬಂಡೆಗಳು ಬಿರಿದುವಂತೆ. ಸಮಾಧಿಗಳು ಬಾಯಿ ತೆರೆದು, ಒಳಗೆ ಮಲಗಿದ್ದ ಅನೇಕರು ಸಂತರ ದೇಹಗಳು ಆತನ ಪುನರುತ್ಥಾನವಾದ ಮೇಲೆ ಎದ್ದು ಬಂದು, ಜರೂಸಲೆಂ ನಗರಕ್ಕೆ ಹೋಗಿ ಅನೇಕರಿಗೆ ಕಾಣಿಸಿಕೊಂಡವಂತೆ. ಯೇಸುವಿನ ಬಳಿಯೇ ಇದ್ದು ಆತನಿಗೆ ಕಾವಲಿದ್ದ ರೋಮಕ ಶತಾಧಿಪತಿಯೂ ಇನ್ನೂ ಇತರರೂ ಆ ಭೂಮಿ ನಡುಗಿದುದನ್ನೂ ಇತರ ವ್ಯಾಪಾರಗಳನ್ನೂ ಕಂಡು, ಬಹುವಾಗಿ ಭಯಗೊಂಡು, 'ಸತ್ಯವಾಗಿಯೂ ಈತನು ದೇವಕುಮಾರನೇ!' ಎಂದರಂತೆ.

ಈ ವರ್ಣನೆಯಲ್ಲಿರುವ ಅಲೌಕಿಕ ವ್ಯಾಪಾರಗಳನ್ನು ಕುರಿತು ಕ್ರೈಸ್ತರಾದವರ ನಂಬಿಕೆಗಳು ಏನೇ ಇರಲಿ; ಆ ಕಾಲದಲ್ಲಿ ನಡೆದ ಯಾವ ಘಟನೆಗಳನ್ನು ಹೀಗೆ ಅಲಂಕಾರಿಕವಾಗಿ ವರ್ಣಿಸಿರಬಹುದು ಎಂಬುದನ್ನು ಊಹಿಸುವುದಕ್ಕಾದರೂ ನಮಗೆ ಸಾಧ್ಯವಾದುದು ಗಾಂಧಿಯವರ ಮರಣಾನಂತರದ ತರುಣದಲ್ಲಿ ನಡೆದ ವಿದ್ಯಮಾನಗಳನ್ನು ಕಂಡದ್ದರಿಂದಲೇ.

ಗಾಂಧಿಯವರು ಬದುಕಿದ್ದಾಗ ಅವರ ಬೆಲೆಯನ್ನು ಕಾಣದಿದ್ದವರು ಕೂಡ ಅವರ ಮರಣದ ವಾರ್ತೆಯನ್ನು ಕೇಳಿ ಕಲಕಿಹೋಗಿ, ತಾವು ಕಳೆದುಕೊಂಡ ವಸ್ತುವಿನ ಘನತೆಯನ್ನು ಜಲಕ್ಕನೆ ಕಂಡರು. ಭೂಮಿ ನಡುಗುವುದು ಎಂದರೆ ಏನೆಂಬುದನ್ನು ತೋರುವ ಹಾಗೆ, ಗಾಂಧಿಯವರ ಮರಣವನ್ನು ಕೇಳಿ ಪ್ರಪಂಚದ ಮೂಲೆಮೂಲೆಗಳಲ್ಲಿಯೂ ಜನರ ಹೃದಯಗಳು ಗಡಗಡನೆ ನಡುಗಿದುವು. ಗಾಂಧಿಯವರಿಗೆ ಆಡಸಿದ ಮಾದರಿಯ ಮರಣ ಮತ್ತೆ ಯಾರುಯಾರಿಗೆ ಯಾವಯಾವಾಗ ಎಲ್ಲಿಎಲ್ಲಿ ಸಂಭವಿಸಿತು ಎಂಬುದನ್ನು ಲೋಕವು ನೆನೆನೆನೆದು ಜ್ಞಾಪಿಸಿಕೊಂಡು, ಅವರು ಒಬ್ಬೊಬ್ಬರನ್ನೂ ಅವರವರ ಹಳೆಯ ಸಮಾಧಿಯಿಂದ ಎಬ್ಬಿಸಿ ನಡೆಸಿಕೊಂಡು ಬಂದಿತು. ರೋಮಕ ಶತಾಧಿಪತಿ ಹೇಗೆ ಯೇಸುವಿನಲ್ಲಿ ಮೊದಲು ಶ್ರದ್ಧೆಯಿಟ್ಟಿರಲಿಲ್ಲವೋ ಅದೇ ಪ್ರಕಾರವಾಗಿ

ಗಾಂಧಿಯವರಲ್ಲಿ ಶ್ರದ್ಧೆಯಿಲ್ಲದೆ ಅವರ ಪ್ರತಿಹೆಜ್ಜೆಯನ್ನೂ ಸಂಶಯ ದೃಷ್ಟಿಯಿಂದಲೇ ನೋಡುತ್ತಿದ್ದವರು ಕೂಡ ಅವರ ಮರಣದ ಮಾತ್ರದಿಂದ ಕಣ್ಣಿನ ಪರೆಯನ್ನು ಕಳೆದುಕೊಂಡು, "ಇವರೊಬ್ಬರೇ ಸರ್ವ ಲೋಕದ ಹಿತಕ್ಕಾಗಿ ನಿರ್ವಂಚನೆಯಿಂದ ದುಡಿಯುತ್ತಿದ್ದವರು" ಎಂದು ಕೊಂಡಾಡಿದರು.

ನಮ್ಮ ಪೂರ್ವಿಕರು ಸರ್ವಸಮೃದ್ಧಿಗೆ ಕಾರಣನಾದ ಪೂಷನ್ ಎಂಬ ದೇವತೆಯನ್ನು ಹೀಗೆ ಪ್ರಾರ್ಥಿಸಿಕೊಳ್ಳುತ್ತಿದ್ದರಂತೆ:

ಹಿರಣ್ಮಯೇನ ಪಾತ್ರೇಣ ಸತ್ಯಾಸ್ಯಾಪಿಹಿತಂ ಮುಖಂ
ತತ್ ತ್ವಂ ಪೂಷನ್ ಅಪಾವೃಣು ಸತ್ಯಧರ್ಮಾಯ ದೃಷ್ಟಯೇ

"ಸತ್ಯದ ಮುಖವು ಚಿನ್ನದ ತಟ್ಟೆಯಿಂದ ಮುಚ್ಚಿಹೋಗಿದೆ. ಸತ್ಯವನ್ನೇ ಧರ್ಮವನ್ನಾಗಿ ಉಳ್ಳ ನಾನು ಕಾಣುವುದಕ್ಕಾಗಿ ನೀನು, ಪೂಷನ್, ಅದನ್ನು ಆಚೆಗೆ ತೆಗೆ" ಎಂದು ಕೇಳುತ್ತಿದ್ದರಂತೆ. ಗಾಂಧಿಯವರ ನಿಜ ರೂಪವು ಅವರ ಇಹಜೀವನದಿಂದ ಮರೆಯಾಗಿತ್ತು. ಆ ಮರೆಯನ್ನು ಆಚೆಗೆ ಸರಿಸಲು ಸಾವು ಬರಬೇಕಾಯಿತು. ಈ ಕಾರಣದಿಂದಲೇ ಇರಬೇಕು, ದೊಡ್ಡವರಾದವರು ಮೃತ್ಯುವನ್ನು ಮಿತ್ರನೆಂದು ಪರಿಗಣಿಸುವುದು.

೩

ಯಾಜ್ಞವಲ್ಕ್ಯಸ್ಮೃತಿಯಲ್ಲಿ ಈ ಮಾತು ಬರುತ್ತದಂತೆ:

ಕೃತಕೃತ್ಯಾಃ ಪ್ರತೀಕ್ಷಂತೇ ಮೃತ್ಯುಂ ಪ್ರಿಯಮಿವಾತಿಥಿಂ
ಪ್ರಾಯೋಽಕೃತಕೃತ್ಯತ್ವಾತ್ ಮೃತ್ಯೋರುದ್ವಿಜತೇ ಜನಃ

ಕೃತಕೃತ್ಯರಾದವರು ಮೃತ್ಯುವನ್ನು ಎದುರು ನೋಡುತ್ತಾರಂತೆ—ಪ್ರಿಯನಾದ ಅತಿಥಿಯನ್ನು ನಿರೀಕ್ಷಿಸುವಂತೆ. ಒಂದುವೇಳೆ ಕೃತಕೃತ್ಯರಾಗಿರದಿದ್ದರೆ, ಆ ಜನರು ಮೃತ್ಯುವನ್ನು ಕಂಡು ಕಳವಳಗೊಳ್ಳುತ್ತಾರಂತೆ.

ಮೃತ್ಯುವಿನ ಬಗೆಗೆ ಸ್ವಲ್ಪ ಹೆಚ್ಚೂಕಡಿಮೆ ಇದೇ ಸಮಭಾವವನ್ನೇ ಬುದ್ಧನ ಧರ್ಮಸೇನಾಪತಿಯೆನ್ನಿಸಿದ್ದ ಸಾರಿಪುತ್ರನು ಹೀಗೆ ಹೇಳುತ್ತಿದ್ದನು:

ನಾಭಿನಂದಾಮಿ ಮರಣಂ ನಾಭಿನಂದಾಮಿ ಜೀವಿತಂ
ನಿಕ್ಖಿಪಿಸ್ಸಂ ಇಮಂ ಕಾಯಂ ಸಂಪಜಾನೊ ಪತಿಸ್ಸತೊ

ನಾನು ಸಾವಿಗೆ ಹೆಚ್ಚು ಸಂತೋಷಪಡುವುದಿಲ್ಲ. ನಾನು ಬದುಕಿಗೆ ಹೆಚ್ಚು ಸಂತೋಷಪಡುವುದಿಲ್ಲ. ಚೆನ್ನಾಗಿ ತಿಳಿದು, ಎಚ್ಚರವುಳ್ಳವನಾಗಿ, (ಸಾಯುವ ಸಮಯ ಬಂದಾಗ) ಈ ದೇಹವನ್ನು ಕೆಳಗಿರಿಸುತ್ತೇನೆ.

ಭಾವಿತಾತ್ಮರಾದವರೆಲ್ಲರೂ ಮೃತ್ಯುವಿನ ಬಗೆಗೆ ಇದೇ ರೀತಿಯ ಸಮಭಾವವನ್ನು ಬೆಳೆಸಿಕೊಂಡಿದ್ದರು ಎಂದು ಹಳೆಯ ಗ್ರಂಥಗಳಿಂದ ತಿಳಿದುಬರುತ್ತದೆ.

ಸತ್ಯಶೋಧನೆಯೆಂಬ ಮಹಾಕಾರ್ಯದಲ್ಲಿ ಗಾಂಧಿಯವರಿಗಿಂತ ಎರಡೂವರೆ ಸಾವಿರ ವರ್ಷಗಳು ಮೊದಲೇ ನಿರಂತರವಾಗಿ ಉದ್ಯುಕ್ತನಾಗಿದ್ದ ಸಾಕ್ರಟಿಸ್ ಎಂಬ ಗ್ರೀಕ್ ಮಹಾನುಭಾವನು ಮರಣವನ್ನು ಹೇಗೆ ಆದರಿಸಿದನೆಂಬುದನ್ನು ಇಲ್ಲಿ ನೆನೆದರೆ ಅಪ್ರಕೃತವಾಗಲಾರದು.

ಗಾಂಧಿಯವರಿಗೆ ಅವರ ಮತದವನೇ ಗುಂಡಿಟ್ಟ ಹಾಗೆ, ಯೇಸುವನ್ನು ಆತನ ಜನವೇ ಶಿಲುಬೆಗೆ ಏರಿಸಿದ ಹಾಗೆ, ಸಾಕ್ರಟಿಸನನ್ನಾದರೂ ಅವನ ಅಥೆನ್ಸಿನವರೇ ವಿಷವಿಕ್ಕಿ ಕೊಂದರು. ಅವರು ಕೊಂದರು ಎಂದರೆ ತಪ್ಪಾದೀತು; ತಾನು ಸತ್ಯವನ್ನು ಕಾಣುವುದಕ್ಕಾಗಿಯೂ ಅವರಿಗೆ ಸತ್ಯವನ್ನು ಕಾಣಿಸುವುದಕ್ಕಾಗಿಯೂ ಸಾಕ್ರಟಿಸನು ತಾನೇ ಕೈಯಾರೆ ವಿಷವನ್ನು ಕೊಂಡನು.

ಅಥೆನ್ಸಿನವರು ಆತನಿಗೆ ಮರಣದಂಡನೆಯನ್ನು ವಿಧಿಸಿದಾಗ, ಅವರ ಆಜ್ಞೆಯ ಪ್ರಕಾರ ವಿಷವನ್ನು ಸಿದ್ಧಪಡಿಸಿಕೊಡುವವನು ವಿಷಪಾತ್ರೆಯನ್ನು ತಂದಾಗ, ಆ ವಿಷವನ್ನು ಹೇಗೆ ಕುಡಿಯಬೇಕೆಂಬ ವಿಧಾನವನ್ನು ಸಾಕ್ರಟಿಸನು ತಾನೇ ಕೇಳಿ ತಿಳಿದುಕೊಂಡನು. ಸೌಮನಸ್ಯದಿಂದ, ಕಿಂಚಿತ್ತೂ ಅದಿರದೆ, ಅಂಗವಿಕಾರವಾಗಲಿ ವರ್ಣವಿಕಾರವಾಗಲಿ ಇಲ್ಲದೆ, ಸ್ಥಿರಬುದ್ಧಿಯಿಂದ ಆ ಪಾತ್ರೆಯನ್ನು ಸ್ವೀಕರಿಸಿ, ಅದರ ಒಳಗಿನದನ್ನು ಮೊದಲು ದೇವತೆಗೆ ಅರ್ಪಿಸಿ ಕೃತಕೃತ್ಯನಾಗಿ, ಬಳಿಕ ಅದನ್ನು ತುಟಿಗೆತ್ತಿ ಶಾಂತಚಿತ್ತನಾಗಿ ಸುಮನಸ್ಸಿನಿಂದ ಕುಡಿದು ಮುಗಿಸಿದನು. ಸುತ್ತ ನೋಡುತ್ತ ನಿಂತವರ ದುಃಖ ಉಕ್ಕಿಬಂತು, ಕಣ್ಣೀರು ಕಟ್ಟೆಯೊಡೆಯಿತು. ಅವರಲ್ಲಿ ಒಬ್ಬ, ಅಪೊಲೊಡೋರಸ್ ಎಂಬವನು ತಡೆಯಲಾರದೆ ಗಟ್ಟಿಯಾಗಿ ರೋದಿಸತೊಡಗಿದಾಗ, ಸಾಕ್ರಟಿಸ್ ಹೇಳಿದ:

'ಇದೇನು, ಮಿತ್ರರೆ? ಹೆಂಗಸರು ಈ ರೀತಿ ಅಪಚಾರಮಾಡಬಾರದೆಂದೇ ಅವರನ್ನು ಕಳುಹಿಸಿಬಿಟ್ಟೆ. ಸಾಯುವವನು ಶಾಂತವಾಗಿ ಸಾಯ ಬೇಕೆಂದು ಕೇಳಿದ್ದೇನೆ. ಆದ್ದರಿಂದ ಶಾಂತರಾಗಿ ತಡೆದುಕೊಳ್ಳಿ' ಎಂದು ಅವರನ್ನು ತಾನು ಸಂತೈಸಿ, ಕಾಲು ಭಾರವಾಗುವವರೆಗೂ ನಡೆಯು ತ್ತಿದ್ದು, ಅನಂತರ ಆ ವಿಷ ತಂದವನು ಹೇಳಿದ ಹಾಗೆ ಬೆನ್ನಡಿಯಾಗಿ ಮಲಗಿದನು. ವಿಷವು ಕ್ರಮೇಣ ಮೇಲುಮೇಲಕ್ಕೆ ಏರುತ್ತಾ ಬಂದು, ಸೊಂಟದ ಬಳಿ ತಣ್ಣಗಾಗುವ ಹೊತ್ತಿಗೆ, ಸಾಕ್ರಟಿಸನು ತನ್ನ ಮುಖದ ಮೇಲಿನ ಮುಸುಕನ್ನು ತೆಗೆದು 'ಕ್ರಿಟೊ! ಅಸ್‌ಕ್ಲೇಪಿಯುಸ್ ದೇವತೆಗೆ ನಾನು ಒಂದು ಕೋಳಿ ಒಪ್ಪಿಸಬೇಕು; ಅದನ್ನು ಒಪ್ಪಿಸಲು ಮರೆಯ ಬೇಡ' ಎಂದು ಹೇಳಿದನು. ಅದೇ ಅವನ ಕಡೆಯ ಮಾತು. ಅನಂತರ ವಿಷ ಎದೆಗೆ ಬಂತು. ಸಾಕ್ರಟಿಸನು ಮೃತ್ಯುಧಾಮಕ್ಕೆ ಹೋದನು.

ಸಾಕ್ರಟಿಸನು ಮರಣವನ್ನು ಎದುರುಗೊಂಡ, ಅಥವಾ ಮರಣದ ಕಡೆಗೆ ನಡೆದ, ಈ ಧೀರವೃತ್ತಾಂತವನ್ನು ತಿಳಿಸಿದ ಫೇಡೊ ಎಂಬ ಸಾಕ್ರ ಟಿಸನ ಶಿಷ್ಯ ಹೇಳುತ್ತಾನೆ: ಸಾಕ್ರಟಿಸನಿಗಿದ್ದ ಧೈರ್ಯ ಅವನು ವಿಷ ಕುಡಿ ಯುವುದನ್ನು ನೋಡುತ್ತಿದ್ದ ಅವರಾರಿಗೂ ಇರಲಿಲ್ಲವಂತೆ. ಅವನು ವಿಷ ಕುಡಿಯುವಾಗ ಹೇಗಾದರೂ ಸಹಿಸಿಕೊಂಡಿದ್ದವರು ಆ ಕುಡಿಯುವುದು ಮುಗಿದೊಡನೆ ಗಳಗಳನೆ ಅಳತೊಡಗಿದರಂತೆ. ಫೇಡೊ ಹೇಳುತ್ತಾನೆ:

> My tears came fast in spite of myself, and I covered my face and wept for myself: it was not for him, but at my own misfortune in losing such a friend.

ಸಾಕ್ರಟಿಸ್ ಸತ್ತನಲ್ಲಾ ಎಂದು ಫೇಡೊ ಅಳಲಿಲ್ಲವಂತೆ; ಸಾಕ್ರಟಿಸ ನಂಥ ಸನ್ಮಿತ್ರನನ್ನು ಕಳೆದುಕೊಂಡೆನಲ್ಲಾ ಎಂದು ತನಗಾಗಿ ಕಣ್ಣೀರು ಕರೆದನಂತೆ.

ದೇಶಕ್ಕೆ ತಂದೆಯಂತಿದ್ದ ಗಾಂಧಿಯವರನ್ನು ಕಳೆದುಕೊಂಡಾಗ ಗೋಳಾಡಿದವರು ಈ ಫೇಡೋವಿಗೆ ಸಮಾನಧರ್ಮಿಗಳು. ಈ ದೇಶ ಗೋಳಾಡಿದ್ದು, ಗಾಂಧಿಯವರು ಹೋದರಲ್ಲಾ ಎಂದಲ್ಲ; ತಾವು ತಬ್ಬಲಿ ಗಳಾದೆವಲ್ಲಾ ಎಂದು.

೪

ಸಾಕ್ರಟೆಸನಂತಹವರನ್ನು ಗೀತೆಯು 'ಸ್ಥಿತಪ್ರಜ್ಞ' ಎಂದು ಕರೆಯುತ್ತದೆ. ಈ ಸ್ಥಿತಪ್ರಜ್ಞನ ಲಕ್ಷಣಗಳು ಗೀತೆಯ ಎರಡನೇ ಅಧ್ಯಾಯದ ಕೊನೆಯಲ್ಲಿ ಹೇಳಲಾಗಿವೆ. ಅದೇ ಎರಡನೆಯ ಅಧ್ಯಾಯದ ಆರಂಭದಲ್ಲಿ, ಸ್ಥಿತಪ್ರಜ್ಞನಾದವನು ಜೀವನವನ್ನೂ ಮರಣವನ್ನೂ ಹೇಗೆ ದೃಷ್ಟಿಸುತ್ತಾನೆ ಎಂಬುದರ ವರ್ಣನೆಯಿದೆ.* ಶ್ರೀ ಭಗವದ್ಗೀತೆಯನ್ನು ತಮಗೆ 'ಸಾಕುತಾಯಿ' ಎಂದೂ ಅದು ತಮ್ಮ 'ಆಧ್ಯಾತ್ಮಿಕ ನಿಘಂಟು' ಎಂದೂ ನಂಬಿ ನಡೆದ ಗಾಂಧಿಯವರಿಗಾದರೂ ಸಾವನ್ನು ಕುರಿತು ಈ ಸಾಕ್ರಟೆಸನಿಗೆ ಇದ್ದ ದೃಷ್ಟಿಯೇ ಮೊದಲಿಂದಲೂ ಕಡೆಯವರೆಗೂ ಇತ್ತೆಂಬುದಕ್ಕೆ ಅವರ ಬರಹಗಳೇ ಸಾಕ್ಷಿ.†

"ಸಾವು ಯಾವಾಗ ಬಂದರೂ ಅದು ಒಂದು ವರ; ಆದರೆ ಸತ್ಯಕ್ಕಾಗಿ ಹೋರಾಡುವಾಗ ಅದಕ್ಕಾಗಿ ಬಂದರೆ, ಆ ವೀರನಿಗೆ ಅದು ಎರಡರಷ್ಟು ವರ. ಮರಣವೆಂಬುದು ವೈರಿಯಲ್ಲ, ಮಿತ್ರರಲ್ಲಿ ಅದು ಪರಮಮಿತ್ರ. ಅದು ನಮಗೆ ಯಾತನೆಯಿಂದ ಮುಕ್ತಿ ಕೊಡುತ್ತದೆ. ನಮ್ಮೊಡನೆ ವಿರೋಧಿಸಲು ನಮಗೇ ಅದು ಸಹಾಯವಾಗುತ್ತದೆ. ಸಾವಿನಿಂದ ನಮಗೆ ಹೊಸ ಅವಕಾಶಗಳೂ ಹೊಸಹೊಸ ಆಶಯಗಳೂ ದೊರಕುತ್ತವೆ. ನಿದ್ರೆ ಹೇಗೋ ಹಾಗೆ ಸಾವು ಕೂಡ ಒಂದು ಸವಿಯಾದ ಚೈತನ್ಯದಾಯಿ. ಆದರೂ ಸ್ನೇಹಿತನಾದವನು ಸತ್ತಾಗ ದುಃಖಿಸುವುದು ಪದ್ಧತಿ. ಮತಾತ್ಮನಾದವನು ಸತ್ತಾಗ, ಈ ಪದ್ಧತಿ ಹೊಂದುವುದಿಲ್ಲ. (೧೯೨೮.)

ಮನುಷ್ಯನ ಬೆಳೆವಣಿಗೆಗೆ ಜೀವನ ಎಷ್ಟು ಮಟ್ಟಿಗೆ ಅಗತ್ಯವೊ ಸಾವೂ ಅಷ್ಟೇ ಅಗತ್ಯ. (೧೯೩೨.)

ಒಂದೇ ನಾಣ್ಯದ ಈಚೆಕಡೆ ಆಚೆಕಡೆ ಇದ್ದಹಾಗೆ, ಬದುಕೂ ಸಾವೂ ಒಂದೇ ವಸ್ತುವಿನ ಅವಸ್ಥಾಭೇದಗಳಲ್ಲದೆ ಬೇರೆಯಲ್ಲ. ವಸ್ತುತಃ ನನ್ನ ಮಟ್ಟಿಗೆ ಸುಖಕ್ಕಿಂತಲೂ ಬದುಕಿಗಿಂತಲೂ ಕಷ್ಟಗಳೂ ಸಾವೂ ಹೆಚ್ಚು ಸತ್ತ್ವವುಳ್ಳವು ಎಂದೆನ್ನಿಸಿವೆ. ಬದುಕಿಗೆ ಉಪ್ಪಿನಹಾಗಿರುವ ಕಷ್ಟಗಳೂ ಪರೀಕ್ಷೆಗಳೂ ಇಲ್ಲದ ಬರಿಯ ಬದುಕಿಗೆ ಏನು ಬೆಲೆ? . . . . ರಾಮ ಸೀತೆಯರ ಕಷ್ಟನಷ್ಟಗಳು, ಪರೀಕ್ಷೆಗಳು, ತಪಸ್ಸುಗಳು ಇವುಗಳ ನಿರೂಪಣೆಯೋ ಹೊರತು, ರಾಮಾಯಣ

* ಇವರ ಸ್ವಲ್ಪಭಾಗ ಇದೇ ಪುಸ್ತಕದ ಪುಟ ೧೮-೨೨ರಲ್ಲಿ ಇದೆ.

† ಹರಿಜನ್—ಸಂಪುಟ ೧೨, ಸಂಚಿಕೆ ೩, ೪.

ವೆಂಬುದು ಮತ್ತೇನು? . . . . ಬದುಕಿಗಿಂತ ಸಾವಿಗೂ ಸಂಕಷ್ಟಕ್ಕೂ ಹೆಚ್ಚು ಬೆಲೆಕೊಟ್ಟು, ಅವುಗಳಲ್ಲಿರುವ ತೊಳೆದು ಶುದ್ಧಿಗೊಳಿಸುವ ಗುಣವನ್ನು ನೀವು ತಿಳಿದು ಅನುಭವಿಸಬೇಕೆಂದು ನನ್ನ ಇಚ್ಛೆ. (೧೯೨೦.)

ಸಾವು, ಅದು ಯಾವಾಗ ಬಂದರೂ ಸರಿಯೆ, ಪ್ರಕೃತಿಯು ತನ್ನ ಸಮತೂಕವನ್ನು ಕಾಪಾಡಿಕೊಳ್ಳುವುದಕ್ಕಾಗಿ ಮಾಡಿದ ಬುದ್ಧಿವಂತಿಕೆಯ ಏರ್ಪಾಟು ಇದು* ಎಂದು ಯೋಚಿಸುವುದರಿಂದ ಅಷ್ಟು ನೆಮ್ಮದಿಯಾಗುತ್ತದೆ. ನಮ್ಮ ಇರುವಿಕೆಯ ಈ ನಿಯಮವನ್ನು ಕಂಡುಕೊಂಡು, ಮೃತ್ಯುವನ್ನು ಆದರಿಸತಕ್ಕ ಸ್ನೇಹಿತನೆಂದೂ ಮುಕ್ತಿದಾಯಕನೆಂದೂ ಕಾಣಲು ಸಿದ್ಧರಾದರೆ, ಬದುಕುವ ಈ ಹುಚ್ಚು ಹೋರಾಟದಲ್ಲಿ ತೊಡಗುವುದು ತಪ್ಪೀತು. ಮಾನವ್ಯದ ಗಣನೆಗಳನ್ನೆಲ್ಲಾ ಕಡೆಗಣಿಸಿ, ಇತರ ಜೀವಗಳನ್ನು ಆಹುತಿ ಕೊಟ್ಟಾದರೂ ಬದುಕಬೇಕೆಂಬ ಬಯಕೆ ನಿಂತೀತು. (೧೯೨೭.)

ಸಾವನ್ನು ಕುರಿತು ಇಂತಹ ಶ್ರದ್ಧೆಯನ್ನು ಬೆಳೆಸಿದವರು 'ಸತ್ತುಹೋದರು' ಎಂದು ಹೇಳಿದರೆ ಅದು ಅಪಚಾರವಾದೀತು. ಪುನಃ ಗಾಂಧಿಯವರ ಮಾತಿನಲ್ಲೇ ಹೇಳುವುದಾದರೆ—

"ಅಂತಹ ಆತನು ಸತ್ತುಹೋದನೆನ್ನುವುದು ಅಪಚಾರ. ಅಂತಹ ಆತನ ಶಾಶ್ವತವಾದ ಸಾರವು ನಮ್ಮೊಡನೆ ಸರ್ವಕಾಲಕ್ಕೂ ನಿಲ್ಲುತ್ತದೆ. ಆತನ ವೀರಜೀವನ, ಆತನ ಸರಳಜೀವನ, ಆತನ ವಿಸ್ಮಯಕಾರಕವಾದ ಸಂತತೋದ್ಯೋಗ, ಆತನ ಸ್ವದೇಶಪ್ರೇಮ ಇವುಗಳನ್ನು ನಮ್ಮ ಬದುಕಿನಲ್ಲಿ ಹಾಸುಹೊಕ್ಕಾಗಿ ನೇದುಕೊಂಡು, ಭಾರತದ ಏಕೈಕ ಲೋಕಮಾನ್ಯನಿಗೆ† ಅವಿನಾಶಿಯಾದ ಸ್ಮಾರಕವನ್ನು ಎತ್ತಿ ನಿಲ್ಲಿಸೋಣ."

* ತೊಟ್ಟಿಲುಗಳೆಷ್ಟೊ ಮಸಣಗಳಷ್ಟು ಧರೆಯೊಳಗೆ
ತೊಟ್ಟಿಲಿಗೆ ಹಬ್ಬ ಮಸಣವು ತೇಗುತಿರಲು
ಹುಟ್ಟಿದವರೆಲ್ಲ ಸಾಯದೆ ನಿಲ್ಲೆ, ಹೊಸತಾಗಿ
ಹುಟ್ಟುವರ್ಗೆಡೆಯೆಲ್ಲಿ? — ಮಂಕುತಿಮ್ಮ (ಮಂಕುತಿಮ್ಮನ ಕಗ್ಗ)

† ಈ ಮಾತು ಲೋಕಮಾನ್ಯ ತಿಲಕರನ್ನು ಉದ್ದೇಶಿಸಿ ಅವರು ಹೇಳಿದ್ದು.

# ಮಾ ಶುಚಃ ! ಯುಧ್ಯಸ್ವ!

## ಶೋಕಪಡಬೇಡ ! ಯುದ್ಧಮಾಡು !

ಈ ಹೊತ್ತಿಗೆ ಅಂದು, ಆ ಶನಿವಾರ ಸಂಜೆ, ಸುಮಾರು ಇದೇ ಹೊತ್ತಿನಲ್ಲಿ, ಗಾಂಧಿಯವರ ಕಳೇಬರ ಅಗ್ನಿಯಲ್ಲಿ ಅರಗಿಹೋಗುತ್ತಿತ್ತು. ಅದರ ಹಿಂದಿನ ಸಂಜೆಯಿಂದ ಹಿಡಿದು ಮಾರನೆಯ ಬೆಳಗ್ಗೆ, ಮಾರನೆಯ ಮಧ್ಯಾಹ್ನ, ಮಾರನೆಯ ಸಂಜೆಯವರೆಗೂ ದೆಹಲಿಯಲ್ಲಿ ಆ ಅಂತ್ಯ ಸಂಸ್ಕಾರಗಳ ಸಂಬಂಧವಾಗಿ ನಡೆದುದೆಲ್ಲವನ್ನೂ ಕಣ್ಣಿಗೆ ಕಟ್ಟಿದಂತೆ ಎ. ಐ. ಆರ್. ಇಂದ ಕಿವಿಯಾರೆ ಕೇಳಿದ್ದೇವೆ. ಆ ಇಪ್ಪತ್ತುನಾಲ್ಕು ಗಂಟೆಗಳ ಕಾಲ ಅದನ್ನು ಕೇಳಿದವರು ಅನುಭವಿಸಿದ ಆ ಯಾತನೆಯನ್ನು ಒಬ್ಬರು ಇನ್ನೊಬ್ಬರಿಗೆ ಹೇಳಬೇಕಾದುದಿಲ್ಲ. ಅನುಭವಿಸಿದವರು ಯಾರೂ ಅದನ್ನು ಮರೆಯುವಂತಿಲ್ಲ. ಆದರೆ ಅದೇ ದುರ್ದಿನದ ಶನಿವಾರದ ರಾತ್ರಿ ಸುಮಾರು ೮-೮|| ಗಂಟೆಯ ಹೊತ್ತಿನಲ್ಲಿ ಗಾಂಧಿಯವರ ದೇಹ ವನ್ನು ಬೆಂಕಿಯ ಬಾಯಿಗೆ ಕೊಟ್ಟು ಸುಮಾರು ಮೂರು ಗಂಟೆಗಳಾದ ಮೇಲೆ, ಇಪ್ಪತ್ತುನಾಲ್ಕು ಗಂಟೆಗೂ ಮಿಕ್ಕು ದುಃಖವನ್ನು ತೋಡಿಹಾಕು ತ್ತಿದ್ದ ಅದೇ ಎ. ಐ. ಆರ್. ಇಂದ ದೃಢವಾದ ಒಂದಾನೊಂದು ಅಶರೀರ ವಾಣಿಯು ಗೀತೆಯ ಕೆಲವು ಶ್ಲೋಕಗಳನ್ನು ಹರಹಿತು.

ಮಾ ತೇ ವ್ಯಥಾ ಮಾ ಚ ವಿಮೂಢಭಾವೋ
ದೃಷ್ಟ್ವಾ ರೂಪಂ ಘೋರಮೀದೃಙ್ಮಮೇದಂ
ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ
ತದೇವ ಮೇ ರೂಪಮಿದಂ ಪ್ರಪಶ್ಯ

"ನನ್ನ ಈ ಘೋರವಾದ ಈ ರೀತಿಯ ರೂಪವನ್ನು ಕಂಡು ವ್ಯಥೆಪಡ ಬೇಡ, ದಿಗ್‌ಭ್ರಾಂತನಾಗಬೇಡ. ಭಯವನ್ನು ಕಳೆದುಕೊಂಡವನಾಗಿ, ಪ್ರೀತಿಗೊಂಡ ಮನಸ್ಸುಳ್ಳವನಾಗಿ, ಪುನಃ ನೀನು ನನ್ನ ಅದೇ ಮೊದ ಲಿನ ಈ ರೂಪವನ್ನು ನೋಡು" ಎಂದು ಹಿಂದೆ ಕೃಷ್ಣನು ಅರ್ಜುನನಿಗೆ ಅಭಯಕೊಟ್ಟಹಾಗೆ, ಗಾಂಧಿಯವರ ಮರಣದಿಂದ ಮೃತಪ್ರಾಯ ವಾಗಿದ್ದವರಿಗೆ ಆ ಶ್ಲೋಕಗಳು ಅಮೃತವಾದುವು.

ನಾಡಿಗೆ ನಾಡೇ ಯಾರ ಮೇಲೆ ತನ್ನ ಸರ್ವಭಾರವನ್ನೂ ಹೊರಿಸಿ ನಿಶ್ಚಿಂತೆಯಿಂದ ಇದ್ದಿತೋ ಅಂತಹ ಒಂದು ಮಹಾಜೀವಕ್ಕೆ ಹಠಾತ್ತಾಗಿ ಒದಗಿದ ಮರಣವನ್ನು ಕಂಡು, ನಾಡು ನಿಜವನ್ನು ತಿಳಿಯದೆ ನಿಶ್ಚೇಷ್ಟ ವಾಗಿದ್ದಾಗ ಈ ಗೀತೆಯ ಪಾಂಚಜನ್ಯವು ಮೊಳಗಿ, ನಾಡನ್ನು ಸತ್ಯ ಸಂಜೀವನದಿಂದ ಉಜ್ಜೀವನಗೊಳಿಸಿತು.

*　　*　　*　　*　　*

ಅಶೋಚ್ಯಾನ್ ಅನ್ವಶೋಚಸ್ತ್ವಂ
ಪ್ರಜ್ಞಾವಾದಾಂಶ್ಚ ಭಾಷಸೇ
ಗತಾಸೂನಗತಾಸೂಂಶ್ಚ
ನಾನುಶೋಚನ್ತಿ ಪಂಡಿತಾಃ

ಯಾರಿಗಾಗಿ ಗೋಳಾಡಬಾರದೋ ಅವರಿಗಾಗಿ ಗೋಳಾಡುತ್ತಿದ್ದೀಯೆ. ಆದರೂ ಪೈಮೇಲೆ ಪ್ರಜ್ಞೆಯಿರುವವನು ಮಾತನಾಡುವ ಹಾಗೆ ಮಾತನಾಡುತ್ತಿದ್ದೀಯೆ. ಬುದ್ಧಿವಂತರಾದವರು, ಜ್ಞಾನಿಗಳಾದವರು, 'ಇಂತಹ ಒಳ್ಳೆಯವರು ಹೊರಟುಹೋದರಲ್ಲಾ, ಇಂತಹವರನ್ನು ಕೊಂದವರು ಇನ್ನೂ ಇದ್ದಾರಲ್ಲಾ' ಎಂದು ಯಾವುದಕ್ಕೂ ಗೋಳಾಡುವುದಿಲ್ಲ.

ಹಾಗಾದರೆ ಗಾಂಧಿಯವರು ಹೋದದ್ದು ಸುಳ್ಳೆ? ಸುಳ್ಳಲ್ಲ.

ದೇಹಿನೋಽಸ್ಮಿನ್ ಯಥಾ ದೇಹೇ
ಕೌಮಾರಂ ಯೌವನಂ ಜರಾ
ತಥಾ ದೇಹಾನ್ತರಪ್ರಾಪ್ತಿಃ
ಧೀರಸ್ತತ್ರ ನ ಮುಹ್ಯತಿ

ಈಗ ತಾನೆ ಯಾರ ದೇಹವನ್ನು ದಹಿಸಿ ಬಂದೆವೋ ಆ ಗಾಂಧಿಯವರು ಒಮ್ಮೆ ಕುಮಾರರಾಗಿದ್ದರು. ಅವರಿಗೆ ಯೌವನ ಬಂದಾಗ ಕೌಮಾರ ಹೋಯಿತೆಂದು ಯಾರೂ ಗೋಳಾಡಲಿಲ್ಲ. ಅವರಿಗೆ ವಯಸ್ಸಾಗಿ ಜರೆ ಹತ್ತಿರ ಬಂದಾಗಲೂ ಅವರಿಗೆ ಯೌವನ ಹೋಯಿತೆಂದು ಯಾರೂ ಗೋಳಾಡಲಿಲ್ಲ. ಅಂತಹವರು ಈಗ ಒಂದು ದೇಹದಿಂದ

ಇನ್ನೊಂದು ದೇಹಕ್ಕೆ ಹೊರಟಿರುವಾಗ ಅವರು ಹೋಗಿಬಿಟ್ಟರೆಂದು ತಲೆ ಕೆಡಿಸಿಕೊಳ್ಳುವುದು ಧೀರರ ಲಕ್ಷಣವಲ್ಲ.

ಆದರೆ ದುಃಖ ಬರುತ್ತದಲ್ಲಾ; ಏನು ಮಾಡುವುದು?

"ತಾನ್ ತಿತಿಕ್ಷಸ್ವ." ಅವುಗಳನ್ನು ತಾಳಿಕೊ. ಏಕೆಂದರೆ—

ಅವಿನಾಶಿ ತು ತದ್ವಿದ್ಧಿ
ಯೇನ ಸರ್ವಮಿದಂ ತತಂ
ವಿನಾಶಮವ್ಯಯಸ್ಯಾಸ್ಯ
ನ ಕಶ್ಚಿತ್ ಕರ್ತುಮರ್ಹತಿ

ಗಾಂಧಿಯವರು ಯಾವುದರಿಂದ ಗಾಂಧಿಯವರಾಗಿದ್ದರೋ ಅದು ಅವಿನಾಶಿಯಾದುದು. ಅದು ಎಲ್ಲ ಕಡೆಯೂ ವ್ಯಾಪಿಸಿಕೊಂಡಿರ ತಕ್ಕದ್ದು. ಹೀಗೆ ಅವ್ಯಯವಾದುದನ್ನು ನಾಶಮಾಡುವುದು ಯಾವ ನಿಂದಲೂ ಸಾಧ್ಯವಿಲ್ಲ.

ಇದೇನು ಮಾತಿದು? ಕಣ್ಣಿಗೆ ಕಾಣುವಂತೆ, ಕಿವಿಗೆ ಕೇಳುವಂತೆ ಇದ್ದ ಗಾಂಧಿಯವರು ಈಗ ಇಲ್ಲವಲ್ಲಾ? ಹೀಗೆ ವ್ಯಯವಾಗಿರುವಾಗ 'ಅವ್ಯಯ'ವೆಂದರೆ ಏನು ಮಾತು?

ನಿಜವೇ. ವ್ಯಯವಾದದ್ದು ಒಂದು, ಅವ್ಯಯವಾಗಿ ಇರುವುದು ಬೇರೆ ಒಂದು. ವ್ಯಯವಾದದ್ದು ದೇಹ, ಅವ್ಯಯವಾದದ್ದು ಜೀವ.

ಅನ್ತವನ್ತ ಇಮೇ ದೇಹಾಃ
ನಿತ್ಯಸ್ಯೋಕ್ತಾಃ ಶರೀರಿಣಃ
ಅನಾಶಿನೋಽಪ್ರಮೇಯಸ್ಯ
ತಸ್ಮಾತ್ ಯುಧ್ಯಸ್ವ ಭಾರತ

'ದೇಹಾನ್ತರಪ್ರಾಪ್ತಿ' ಎಂದೆವೇ! ಜೀವಿಯು ಆಶ್ರಯಿಸುವ ಈ ದೇಹಗಳೆಲ್ಲಾ ಒಂದಲ್ಲ ಒಂದು ದಿನ ಕೊನೆಗಾಣಲೇಬೇಕು. ಆದರೆ ಈ ಶರೀರಗಳನ್ನು ಹೊಂದುವ ಶರೀರಿ ಮಾತ್ರ ನಿತ್ಯ, ಅನಾಶಿ, ಅಪ್ರಮೇಯ. ಆದಕಾರಣ, ದುಃಖಪಡತಕ್ಕದ್ದಲ್ಲ.

ಮತ್ತೇನು ಮಾಡಬೇಕು?

ತಸ್ಮಾತ್ ಯುಧ್ಯಸ್ವ! ಆದಕಾರಣ ಯುದ್ಧಮಾಡು!

ಯಾವುದಕ್ಕಾಗಿ?

ಯಾವುದಕ್ಕಾಗಿ ಗಾಂಧಿಯವರು ಈ ದೇಹದಲ್ಲಿದ್ದಾಗ ಹೋರಾಡುತ್ತಿದ್ದರೋ ಅದಕ್ಕಾಗಿ, ಯುಧ್ಯಸ್ವ!

ಹಾಗಾದರೆ, ಶರೀರ ಹೋದರೂ ಗಾಂಧಿಯವರು ಶರೀರಿಯಾಗಿ ಇರುವುದಾದರೆ, ಅವರನ್ನು ಕೊಂದರೆನ್ನುವುದು ತಪ್ಪೆ?

ಹೌದು, ತಪ್ಪು.

ಯ ಏನಂ ವೇತ್ತಿ ಹಂತಾರಂ
ಯಶ್ಚೈನಂ ಮನ್ಯತೇ ಹತಂ
ಉಭೌ ತೌ ನ ವಿಜಾನೀತೋ
ನಾಯಂ ಹಂತಿ ನ ಹನ್ಯತೇ

ಗಾಂಧಿಯಂತಹವರನ್ನು ಇವನು ಕೊಂದನೆನ್ನುವುದೂ ಗಾಂಧಿಯವರು ಇವನಿಂದ ಕೊಲೆಯಾದರೆನ್ನುವುದೂ ತಿಳಿವಳಿಕೆಯ ಮಾತಲ್ಲ. ಗಾಂಧಿಯಂತಹವರನ್ನು ಕೊಲ್ಲುವುದೂ ಸಾಧ್ಯವಿಲ್ಲ, ಅವರು ಕೊಲೆಯಾಗುವುದೂ ಸಾಧ್ಯವಿಲ್ಲ.

ಹಾಗಾದರೆ, ಇಂಥವರು ಇವರನ್ನು ಕೊಂದರೆಂದು ಅವರಿಗೆ ಶಿಕ್ಷೆ ವಿಧಿಸುವರಲ್ಲಾ, ಅದು ಏಕೆ?

ಆ ಶಿಕ್ಷೆ ಅವರ ಮಿಥ್ಯಾದೃಷ್ಟಿಗಾಗಿ; ದೇಹವನ್ನು ಹೊಡೆದರೆ, ಜೀವಕ್ಕೆ ಹಾನಿಯಾಯಿತೆಂಬ ತಪ್ಪು ತಿಳಿವಳಿಕೆಗಾಗಿ.

ವೇದಾವಿನಾಶಿನಂ ನಿತ್ಯಂ
ಯ ಏನಮಜಮವ್ಯಯಂ
ಕಥಂ ಸ ಪುರುಷಃ ಪಾರ್ಥ
ಕಂ ಘಾತಯತಿ ಹಂತಿ ಕಂ

ಹೀಗೆ ಜೀವವು ಅವಿನಾಶಿ, ನಿತ್ಯ, ಅಜ, ಅವ್ಯಯ ಎಂಬುದನ್ನು ತಿಳಿದವರು ಯಾರನ್ನು ಕೊಲ್ಲುತ್ತಾರೆ, ಯಾರನ್ನು ಕೊಲ್ಲಿಸುತ್ತಾರೆ?

ಈ ದೇಹದ ವಿಸರ್ಜನವೆಂಬುದು ತೊಟ್ಟ ಹಳೆಯ ವಸ್ತ್ರಗಳನ್ನು ಕಳಚಿ ಬಿಸುಟ ಹಾಗೆ.

ವಾಸಾಂಸಿ ಜೀರ್ಣಾನಿ ಯಥಾ ವಿಹಾಯ
ನವಾನಿ ಗೃಹ್ಣಾತಿ ನರೋಽಪರಾಣಿ

ತಥಾ ಶರೀರಾಣಿ ವಿಹಾಯ ಜೀರ್ಣಾನ್
ಅನ್ಯಾನಿ ಸಂಯಾತಿ ನವಾನಿ ದೇಹೀ

ಇದು ಜೀವದ ಒಂದು ನಿತ್ಯಕರ್ಮ. ಶರೀರ ಸವೆದು ಶಿಥಿಲವಾಯಿತೆಂದರೆ, ಶರೀರಿ ಅದನ್ನು ಕಳಚಿ ಎಸೆದು ಹೊಸದನ್ನು ಹಾಕಿಕೊಳ್ಳುತ್ತದೆ. ಹೀಗೆ ದೇಹದ ವ್ಯತ್ಯಾಸದಿಂದ ಅದು ಬೇರೆಯೆನ್ನಿಸಿದರೂ ದೇಹಿ ಮಾತ್ರ ಅದೇ. ಅದು

ನಿತ್ಯಃ ಸರ್ವಗತಃ ಸ್ಥಾಣುಃ ಅಚಲೋಽಯಂ ಸನಾತನಃ

ವೇದಾಂತ ಯಾವುದರಿಂದ ವೇದಾಂತವಾಯಿತೋ, ರಾಮನೂ ಕೃಷ್ಣನೂ ಯಾವುದರಿಂದ ರಾಮ ಕೃಷ್ಣ ಆದರೋ, ಗೀತೆ ಯಾವುದರಿಂದ ಗೀತೆ ಆಯಿತೋ, ರಾಮಾಯಣ ಭಾರತಗಳು ಯಾವುದರಿಂದ ಇಂದಿಗೂ ರಾಮಾಯಣ ಭಾರತಗಳೆನ್ನಿಸಿಕೊಂಡಿರುವುವೋ ಅದನ್ನು ಪರಿಶೀಲಿಸಿ ತಿಳಿದುಕೊಂಡು, ಗಾಂಧಿಯವರು ಯಾವುದರಿಂದ ಗಾಂಧಿಯವರಾದರೋ ಅದನ್ನೂ ಪರಿಶೀಲಿಸಿ, ಎರಡನ್ನೂ ನಿರ್ಮಲವಾದ ಮನಸ್ಸಿನಿಂದ ಹೋಲಿಸಿ ನೋಡು. ಆಗ ನಿನಗೆ ಈ

ನಿತ್ಯಃ ಸರ್ವಗತಃ ಸ್ಥಾಣುಃ ಅಚಲೋಽಯಂ ಸನಾತನಃ

ಎಂಬುದು ಗಾಂಧಿಯವರಿಗೆ ಹೇಗೆ ಒಪ್ಪುವುದೆಂದು ತಿಳಿಯುತ್ತದೆ.

ಹೀಗೆ, ಗಾಂಧಿ ಯಾವುದರಿಂದ ಗಾಂಧಿ ಆದರೋ ಅದು ಅವ್ಯಕ್ತವೂ ಅಚಿನ್ತ್ಯವೂ ಅವಿಕಾರ್ಯವೂ ಆದುದರಿಂದಲೇ,

ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ

ಇದನ್ನು ತಿಳಿದ ಮೇಲೆ, ಅದನ್ನೇ ನೆನೆಸಿಕೊಂಡು ಶೋಕಪಡುವುದು ಯುಕ್ತವಲ್ಲ.

ಹೋಗಲಿ, ಯಾವುದಕ್ಕಾಗಿ ಶೋಕಪಡುತ್ತೇವೋ ಅದನ್ನು ತಪ್ಪಿಸುವುದಾದರೂ ಒಂದು ವೇಳೆ ಸಾಧ್ಯವಾಗಿದ್ದರೆ, ಶೋಕಪಡುವುದನ್ನು ಹೇಗಾದರೂ ಸಮರ್ಥಿಸಬಹುದು. ಆದರೆ—

ಜಾತಸ್ಯ ಹಿ ಧ್ರುವೋ ಮೃತ್ಯುಃ
ಧ್ರುವಂ ಜನ್ಮ ಮೃತಸ್ಯ ಚ
ತಸ್ಮಾತ್ ಅಪರಿಹಾರ್ಯೇಽರ್ಥೇ
ನ ತ್ವಂ ಶೋಚಿತುಮರ್ಹಸಿ

ಹುಟ್ಟಿದವನಿಗೆ ಸಾವು ಖಂಡಿತ. ಸತ್ತವನು ಹುಟ್ಟುವುದೂ ಖಂಡಿತ. ಗಾಂಧಿಯಾದರೂ ಅಷ್ಟೆ, ಯಾರಾದರೂ ಅಷ್ಟೆ. ಆದ್ದರಿಂದ, ಪರಿಹರಿಸಲು ಆಗದ ಇದಕ್ಕಾಗಿ ಶೋಕಪಡುವುದು ತಕ್ಕದ್ದಲ್ಲ.

ಅಲ್ಲದೆ, ಶೋಕಪಡದೆ ಇರುವುದಕ್ಕೆ ಮತ್ತೂ ಒಂದು ಕಾರಣವಿದೆ. ಯಾವುದು ಹೋಯಿತೆಂದು ಗೋಳಾಡುವೆವೋ ಅದು ನಿಜವಾಗಿಯೂ ಹೋಗಿಲ್ಲ; ಕಣ್ಣಿಗೆ ಕಾಣದೆ ಇದೆ ಅಷ್ಟೆ. ಅದು ಈ ಮೊದಲು ಇದು ವರೆಗೆ ಕಣ್ಣಿಗೆ ಕಾಣುತ್ತಾ ಇತ್ತು. ಅದಕ್ಕೂ ಮೊದಲು ಅದು ಇರಲೇ ಇಲ್ಲವೆಂದಲ್ಲ; ಇತ್ತು, ಕಣ್ಣಿಗೆ ಕಾಣದ ಹಾಗೆ ಇತ್ತು.

ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ
ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ

ಇದಕ್ಕೆ ಏಕೆ ಗೋಳಾಡಬೇಕು? ಏಕೆ ಆಶ್ಚರ್ಯಗೊಳ್ಳಬೇಕು?

ದೇಹೀ ನಿತ್ಯಮವಧ್ಯೋಽಯಂ
ದೇಹೇ ಸರ್ವಸ್ಯ ಭಾರತ
ತಸ್ಮಾತ್ ಸರ್ವಾಣಿ ಭೂತಾನಿ
ನ ತ್ವಂ ಶೋಚಿತುಮರ್ಹಸಿ

ಎಲ್ಲಿ ಯಾವ ದೇಹವನ್ನು ತೆಗೆದುಕೊಂಡರೂ ಅದರೊಳಗಿನ ದೇಹಿ ಯನ್ನು ವಧಿಸಲು ಸಾಧ್ಯವೇ ಇಲ್ಲ. ಆದ್ದರಿಂದ ಯಾರು ಎಲ್ಲಿ ಹೇಗೆ ಸತ್ತರೂ ಶೋಕಪಡುವುದು ತರವಲ್ಲ.

* * * * *

ಇದು, ಕಳೆದ ಶನಿವಾರ ರಾತ್ರಿ ಗೋಳಿನಿಂದ ಕಂಗೆಟ್ಟಿದ್ದ ಭಾರ ತಕ್ಕೆ ದೆಹಲಿಯು ಸಂಜೀವನವಾಗಿ ಕಿವಿಯಿಂದ ಕುಡಿಸಿದ ಅಮೃತದ ಮಾತು; ದೇಹವನ್ನು ಬೆಂಕಿಗೆ ದಾನಮಾಡಿದ ಗಾಂಧಿಯವರ ಅಶರೀರ ವಾಣಿಯ ಹಾಗೆ.

ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ
ನೈತತ್ತ್ವಯ್ಯುಪಪದ್ಯತೇ
ಕ್ಷುದ್ರಂ ಹೃದಯದೌರ್ಬಲ್ಯಂ
ತ್ಯಕ್ತ್ವೋತ್ತಿಷ್ಠ ಪರಂತಪ

ಎಂದು ಹಿಂದೆ ಶ್ರೀಕೃಷ್ಣನು ಅರ್ಜುನನನ್ನು ಹೊಡೆದು ಎಬ್ಬಿಸಿದ ಹಾಗೆ.

ನಿಜವೇ. ಗಾಂಧಿಯವರ ಅಂತಿಮಯಾತ್ರೆಯ ಅಂತಿಮಘಟ್ಟದ ಅಂತಿಮಕಾರ್ಯದ ಕೊನೆಯ ಅಂಗವಾಗಿ ಈ ಗೀತಾಭಾಗವನ್ನು ಹಾಡಿ ಆ ರಾತ್ರಿಯನ್ನು ಮುಗಿಸಿದುದು ಅವರ ಜೀವನದ ನಿರಂತರ ಚರ್ಯೆಗೆ ಸಮಂಜಸವಾದ ಮುಕ್ತಾಯವಾಗಿತ್ತು. ಯಾರು ಚಿಕ್ಕಂದಿನಲ್ಲಿ ಹೆತ್ತ ತಾಯಿಯನ್ನು ಕಳೆದುಕೊಂಡು ಗೀತೆಯನ್ನು ಎರಡನೆಯ ತಾಯಿ ಯೆಂದು ಆಶ್ರಯಿಸಿದ್ದರೋ, ಯಾರು ಗೀತೆಯು ವರ್ಣಿಸಿದ ಕರ್ಮ ಯೋಗಿಯನ್ನು ಕಣ್ಣೆದುರಿಗೆ ಕಟ್ಟುವಂತೆ ಬದುಕಿ ನಂಬಿಸಿದರೋ, ಅವರ ಇಹಚರ್ಯೆಯ ಕೊನೆಯ ನೆನವಿಗೆ ಈ ಮಾತುಗಳಿಗಿಂತ ಯುಕ್ತ ವಾದುದು ಎಲ್ಲಿಂದ ಬರಬೇಕು?

ಒಂದು ಕಡೆ—"ಮಾ ಶುಚಃ." ಇನ್ನೊಂದು ಕಡೆ—'ಯುಧ್ಯಸ್ವ!' ಒಂದು ಅಭಯಹಸ್ತ! ಒಂದು ವರದಹಸ್ತ!

ಈ ಎರಡರಲ್ಲಿ ಮೊದಲನೆಯದನ್ನು, 'ಮಾ ಶುಚಃ' ಎಂಬುದನ್ನು, ಇನ್ನು ನಾಲ್ಕಾರು ದಿನ ಕಳೆದ ಮೇಲೆ ಹೇಳಬೇಕಾದ ಅಗತ್ಯ ಕಡಿಮೆ ಯಾಗುತ್ತದೆ. ದಿನ ಕಳೆದ ಹಾಗೆಲ್ಲಾ ಗಾಯ ಮಾಯುತ್ತದೆ. ಅದರ ಜೊತೆಯಲ್ಲಿಯೇ 'ಯುಧ್ಯಸ್ವ' ಎಂಬ ಕಹಳೆಯ ಕೂಗೂ ದೂರವಾಗಿ ಕ್ಷೀಣವಾಗುವ ಸಂಭವವುಂಟು. ಆದರೆ ಅದು ಹಾಗಾಗಬಾರದು! ಗಾಂಧಿಗಾಗಿ ಅಲ್ಲ; ನಮ್ಮ ದೇಶಕ್ಕಾಗಿ, ನಮ್ಮ ಜನಕ್ಕಾಗಿ, ಅದಕ್ಕಿಂತ ಮುಖ್ಯವಾಗಿ, ಈ ನಮಗೆ. ಈ ನಮಗಾಗಿ—'ಯುಧ್ಯಸ್ವ' ಎಂಬುದನ್ನು ನಾವು ಮರೆಯಬಾರದು, ಮರೆಯಲಾಗದು.

ಯುಧ್ಯಸ್ವ! ಗಾಂಧಿಯವರು ಯಾವುದಕ್ಕಾಗಿ ಹೋರಾಡಿದರೋ, ಯಾವುದಕ್ಕಾಗಿ 'ಮಾಡು, ಇಲ್ಲವೆ ಮಡಿ' ಎಂಬ ಅಘೋರವ್ರತವನ್ನು ತೊಟ್ಟರೋ, ಯಾವುದಕ್ಕಾಗಿ ಅವರು ಮಾಡುತ್ತಲೇ ಮಡಿದರೋ— ಅದಕ್ಕಾಗಿ, ಯುಧ್ಯಸ್ವ!

"ನ ತ್ವಂ ಶೋಚಿತುಮರ್ಹಸಿ!" "ಯುಧ್ಯಸ್ವ!" ಇದು ಗಾಂಧಿ ಯವರ ಜೀವನನಾಟಕಕ್ಕೆ ಭರತವಾಕ್ಯವಾಯಿತು. ಅದೇ ಭರತವಾಕ್ಯ ನಮ್ಮಲ್ಲಿ ಪ್ರತಿಯೊಬ್ಬರ ಜೀವನನಾಟಕಕ್ಕೂ ನಾಂದಿಯಾಗಲಿ.

# “ಸಮವಾಯೊ ಏವ ಸಾಧು”

## ಹೊಂದಿಕೊಂಡು ಬದುಕುವುದು—ಅದೇ ಒಳ್ಳೆಯದು

ಇದೇ ಸರ್ವಜಿತು ಸಂವತ್ಸರದ ಆಗಸ್ಟ್ ಹದಿನೈದನೆಯ ದಿನ ನಮ್ಮ ಸ್ವತಂತ್ರರಾಷ್ಟ್ರದ ಸೂತ್ರಧಾರಕರು ರಾಷ್ಟ್ರಸೇವಾದೀಕ್ಷೆಯ ಪ್ರತಿಜ್ಞೆಯನ್ನು ಎತ್ತಿಕೊಳ್ಳುವ ಸುಮುಹೂರ್ತದಲ್ಲಿ ಪ್ರಸಿದ್ಧ ದಾರ್ಶನಿಕರಾದ ಶ್ರೀ ಸರ್ವಪಲ್ಲಿ ರಾಧಾಕೃಷ್ಣನ್ ಅವರು ಭಾಷಣಮಾಡುತ್ತಾ, ನಡುವೆ “ಇದುವರೆಗೆ ಒಂದಾಗಿದ್ದ ಭಾರತ ಈಗ ಎರಡಾಗಿದ್ದರೂ, ಮುಂದೆ ಎರಡೂ ಬದುಕಿ ಬಾಳಬೇಕಾದರೆ, ಎರಡೂ ಒಂದೇ ಎನ್ನುವ ಭಾವವನ್ನು ಬೆಳೆಸಬೇಕು” ಎಂಬ ಅರ್ಥಬರುವಂತೆ ಸತ್ತ್ವಪರೀತವಾದ ಸಿಂಹನಾದಮಾಡುವ ಮಧ್ಯೆ **“ಸಮವಾಯೊ ಏವ ಸಾಧು”** ಎಂಬ ಒಂದು ಮಹಾವಾಕ್ಯವನ್ನು ಉದ್ಧರಿಸಿದರು; “ಸಮರಸವೇ ಸಾಧು” ಎಂದು, ಅದರ ಅರ್ಥವನ್ನು ಈ ಕಾಲದ ಪರಿಸ್ಥಿತಿಗೆ ಅನ್ವಯಿಸಿದರು.

ಈ **“ಸಮವಾಯೊ ಏವ ಸಾಧು”** ಎಂಬ ಮಹಾವಾಕ್ಯವು, ಯಾವ ನಮ್ಮ ನೂತನ ಸ್ವಾರಾಜ್ಯದ ಆದರ್ಶ ಆಕಾಂಕ್ಷೆಗಳ ಆಡಕವಾದ ಪ್ರತೀಕವಾಗಿ ಈಗ ಬಾನೇರಿ ಹಾರುತ್ತಿದೆಯೋ ಆ ತ್ರಿವರ್ಣಪತಾಕೆಯ ಹೃದಯಸ್ಥಾನದಲ್ಲಿ ಸುಪ್ರತಿಷ್ಠಿತವಾಗಿರುವ ಧರ್ಮಚಕ್ರವನ್ನು ನಮಗೆ ದಯೆಯಿಂದ ದಾನಮಾಡಿದ ದೇವಾನಾಂಪ್ರಿಯ ಪ್ರಿಯದರ್ಶಿ ರಾಜನೆನಿಸಿದ ಅಶೋಕನ ಮುಖದಿಂದ ಬಂದ ಮಹಾವಾಕ್ಯ.

ಬಹುಜನದ ಸುಖಕ್ಕಾಗಿ, ಬಹುಜನದ ಹಿತಕ್ಕಾಗಿ, ಸಕಲ ಲೋಕದ ಮೇಲಿನ ಅನುಕಂಪದಿಂದ ಕಾರ್ಯೋನ್ಮುಖನಾದ ಬುದ್ಧಗುರುವು ತನ್ನ **‘ಬುದ್ಧವಚನ’**ವನ್ನು ಜಗತ್ತಿಗೆ ಕರುಣಿಸಿದಂತೆಯೇ ಆ ಬುದ್ಧನ ಧರ್ಮವೆಂಬ ರಾಮಪಾದದ ಸ್ಪರ್ಶಕ್ಕೆ ಸಿಕ್ಕಿ ಉದ್ಧಾರವಾದ ಅಶೋಕನ ಪಾಷಾಣಹೃದಯ ತನ್ನ ಅಮೋಘವಾದ ಮಾರ್ದವದಿಂದ ಶಿಲಾಪರ್ವತಗಳ ಮೇಲೂ ಶಿಲಾಸ್ತಂಭಗಳ ಮೇಲೂ ಕಡೆಯಿಸಿದ **ಅಶೋಕವಚನ**ದ ಅಮೃತವಾಕ್ಯಸಂತಾನದಲ್ಲಿ ಈ **“ಸಮವಾಯೊ ಏವ ಸಾಧು”** ಎಂಬುದು ಅಪ್ರತಿಮವಾದ ರತ್ನ.

೧

ಈ ರತ್ನದ ನಿಜವಾದ ಬೆಲೆ ನಿರ್ಣಯವಾಗಬೇಕಾದರೆ ಅದು ದೊರಕುವ ಇಡಿಯ ಹಾರವನ್ನೇ ಲಕ್ಷಿಸಬೇಕು. ಈ ಹಾರವನ್ನು 'ಅಶೋಕನ ಹನ್ನೆರಡನೆಯ ಶಿಲಾಶಾಸನ' ಎಂದು ಕರೆಯುತ್ತಾರೆ. ಕೆಳಗೆ ಉದ್ಧರಿಸಿರುವ ಆ ಶಾಸನ ಕಾಥಿಯವಾಡದಲ್ಲಿರುವ ಗಿರ್‌ನಾರ್ ಪರ್ವತದ ಬಂಡೆಗಳ ಮೇಲೆ ಕೆತ್ತಿದ್ದು. ಇದೇ ಶಾಸನದ ಪ್ರತಿಗಳು ಭಾರತದೊಳಗೆ ಇನ್ನೂ ನಾಲ್ಕಾರುಕಡೆ ದೊರಕುವುವಾದರೂ, ಅದನ್ನೆಲ್ಲ ಬರೆದಿರುವ ಲಿಪಿ—**ಬ್ರಾಹ್ಮೀಲಿಪಿ;** ಎಂದರೆ ಈ ದೇಶದವರಿಗೆಲ್ಲ ಪರಿಚಿತವಾದ ಲಿಪಿ. ಅದೇ ಹನ್ನೆರಡನೆಯ ಶಾಸನವನ್ನು ವಾಯುವ್ಯದ ಖೈಬರ್ ಕಣಿವೆಯ ಬಳಿಯೂ ಕೆತ್ತಿಸಿದ್ದಾನೆ. ಆದರೆ ಅದರ ಲಿಪಿ ಮಾತ್ರ—**ಖರೋಷ್ಠೀ;** ಎಂದರೆ ಖೈಬರಿನ ಆಚೆಕಡೆಯಿಂದ ಬರುವವರಿಗೆ ಪರಿಚಿತವಾದ ಲಿಪಿ.

ಹೀಗೆ ಭಾರತದ ಒಳಗಿನವರಿಗೂ ಭಾರತದ ಹೊರಗಿನವರಿಗೂ ತಿಳಿದಿರುವುದು ಮೇಲೆಂದು ಅಶೋಕನು ಅಭಿಪ್ರಾಯಪಟ್ಟ ಈ **'ಸಮವಾಯೊ ಏವ ಸಾಧು'** ಎಂಬ ಮಹಾವಾಕ್ಯವನ್ನು ಒಳಕೊಂಡ ಅವನ ಹನ್ನೆರಡನೆಯ ಶಾಸನವನ್ನು ಮೊದಲು ಮೂಲದ ಮಾತುಗಳಲ್ಲಿಯೆ ಪರಿಚಯಮಾಡಿಕೊಳ್ಳೋಣ.

[ಹನ್ನೆರಡನೆಯ ಶಿಲಾಶಾಸನ—ಗಿರ್‌ನಾರ್]

ದೇವಾನಂಪಿಯೆ ಪಿಯದಸಿ ರಾಜಾ ಸವ ಪಾಸಂಡಾನಿ ಚ ಪವಜಿತಾನಿ ಚ ಘರಸ್ತಾನಿ ಚ ಪೂಜಯತಿ ದಾನೇನ ಚ ವಿವಾಧಾಯ ಚ ಪೂಜಾಯ ಪೂಜಯತಿ ನೇ

ನ ತು ತಥಾ ದಾನಂ ವ ಪೂಜಾ ವ ದೇವಾನಂಪಿಯೊ ಮಂಞತೆ ಯಥಾ ಕಿತಿ ಸಾರವಢೀ ಅಸ ಸವಪಾಸಂಡಾನಂ

ಸಾರವಢೀ ತು ಬಹುವಿಧಾ

ತಸ್ಸ ತು ಇದಂ ಮೂಲಂ ಯ ವಚೀಗುತೀ ಕಿಂತಿ ಆತ್ಪಪಾಸಂಡಪೂಜಾ ವ ಪರಪಾಸಂಡಗರಹಾ ವ ನೊ ಭವೆ ಅಪ್ರಕರಣಂ ಹಿ

ಲಹುಕಾ ವ ಅಸ ತಮ್ಹಿ ತಮ್ಹಿ ಪ್ರಕರಣೆ

ಪೂಜೇತಯಾ ತು ಏವ ಪರಪಾಸಂಡಾ ತೇನ ತನ ಪ್ರಕರೇಣ

ಏವಂ ಕರುಂ ಆತ್ಪಪಾಸಂಡಂ ಚ ವಢಯತಿ ಪರಪಾಸಂಡಸ ಚ ಉಪಕರೋತಿ

ತದಂಞಥಾ ಕರೋತೊ ಆತ್ಪಪಾಸಡಂ ಛ ಛ್ಣತಿ ಪರಪಾಸಂಡಸ ಛ ಪಿ ಅಪಕ
ಗೋತಿ

ಯೋ ಹಿ ಕೋಛಿ ಆತ್ಪಪಾಸಂಡಂ ಪೂಜಯತಿ ಪರಪಾಸಂಡಂ ವ ಗರಹತಿ ಸವಂ ಆತ್ಪಪಾಸಂಡಭತಿಯಾ ಕಿಂತಿ ಆತ್ಪಪಾಸಂಡಂ ದೀಪಯೇಮ ಇತಿ ಸೊ ಛ ಪುನ ತಥ ಕರಾತೊ ಆತ್ಪಪಾಸಂಡಂ ಬಾಢತರಂ ಉಪಹನಾಸಿ

ತ ಸಮವಾಯೊ ಏವ ಸಾಧು ಕಿಂತಿ ಅಞಮಂಞಸ ಧಂಮಂ ಸ್ರುಣಾರು ಛ ಸುಸುಂಸೇರ ಛ ಏವಂ ಹಿ ದೇವಾನಂಪಿಯಸ ಇಛಾ ಕಿಂತಿ ಸವಪಾಸಂಡಾ ಬಹುಸ್ರುತಾ ಛ ಅಸು ಕಲಾಣಾಗಮಾ ಛ ಅಸು

ಯೇ ಛ ತತ್ರ ತತ ಪ್ರಸಂನಾ ತೇಹಿ ವತವ್ಯಂ ದೇವಾನಂಪಿಯೊ ನೊ ತಥಾ ದಾನಂ ವ ಪೂಜಂ ವ ಮಂಞತೆ ಯಥಾ ಕಿಂತಿ ಸಾರವಢೀ ಅಸ ಸರ್ವಪಾಸಡಾನಂ

ಬಹಕಾ ಛ ಏತಾಯ

ಅಥ ವ್ಯಾಪತಾ ಧಂಮಮಹಾಮಾತಾ ಛ ಇಥೀಝಖಮಹಾಮಾತಾ ಛ ವಛ ಭೂಮಿಕಾ ಛ ಅಞೇ ಛ ನಿಕಾಯಾ

ಅಯಂ ಛ ಏತಸ ಫಲ ಯ ಆತ್ಪಪಾಸಂಡವಢೀ ಛ ಹೋತಿ ಧಂಮಸ ಛ ದೀಪನಾ

[ಮೇಲಿನ ಶಾಸನದ ಕನ್ನಡ ಅನುವಾದ]

ದೇವಾನಾಂಪ್ರಿಯನಾದ ಪ್ರಿಯದರ್ಶಿ ರಾಜನು ಸರ್ವಮತಗಳನ್ನೂ ಪ್ರವ್ರಜಿತರನ್ನೂ ಗೃಹಸ್ಥರನ್ನೂ ಪೂಜಿಸುತ್ತಾನೆ; ದಾನದಿಂದಲೂ ವಿವಿಧವಾದ ಪೂಜೆಯಿಂದಲೂ ಅವರನ್ನು ಪೂಜಿಸುತ್ತಾನೆ.

ಆದರೆ, ಸರ್ವಮತಗಳ ಸಾರವೃದ್ಧಿಯಾಗಲಿ ಎಂಬುದನ್ನು ಹೇಗೋ ಹಾಗೆ ದಾನವನ್ನಾಗಲಿ ಪೂಜೆಯನ್ನಾಗಲಿ ದೇವಾನಾಂಪ್ರಿಯನು ಗಣಿಸುವುದಿಲ್ಲ.

ಸಾರವೃದ್ಧಿಯಾದರೋ ಬಹುವಿಧವಾಗಿ.

ಆದಕ್ಕೆ ಇದು ಮೂಲ: ವಾಚೀಗುಪ್ತಿ; ಎಂದರೆ, ತನ್ನ ಮತವನ್ನು ಪೂಜಿಸುವುದಾಗಲಿ ಪರಮತವನ್ನು ನಿಂದಿಸುವುದಾಗಲಿ ಪ್ರಕರಣದಲ್ಲಿ ಅಲ್ಲದೆ ಆಗಬಾರದು.

ಆಯಾ ಪ್ರಕರಣದಲ್ಲಿ (ಪೂಜೆಯಾಗಲಿ ನಿಂದೆಯಾಗಲಿ) ಲಘುವಾಗಿ ಆಗಬೇಕು.

ಆಯಾ ಪ್ರಕಾರಗಳಿಂದ ಪರಮತಗಳನ್ನು ಪೂಜಿಸಲೇಬೇಕು.

ಹೀಗೆ ಮಾಡಿದರೆ, ತನ್ನ ಮತವನ್ನೂ ವೃದ್ಧಿಗೊಳಿಸುತ್ತಾನೆ, ಪರ ಮತಕ್ಕೂ ಉಪಕಾರ ಮಾಡುತ್ತಾನೆ.

ಇದರಿಂದ ಬೇರೆ ಮಾಡಿದರೆ, ತನ್ನ ಮತವನ್ನೂ ಕತ್ತರಿಸುತ್ತಾನೆ, ಪರಮತಕ್ಕೂ ಅಪಕಾರ ಮಾಡುತ್ತಾನೆ.

ಯಾರು—ಎಲ್ಲವೂ ತನ್ನ ಮತದಲ್ಲಿರುವ ಭಕ್ತಿಯಿಂದಲೇ, ಎಂದರೆ, ತನ್ನ ಮತವನ್ನು ಬೆಳಗುತ್ತೇನೆ ಎಂದು—ತನ್ನ ಮತವನ್ನು ಪೂಜಿಸಿ ಅಥವಾ ಪರಮತವನ್ನು ನಿಂದಿಸಿ ಮಾಡುತ್ತಾನೋ ಅವನು ಹಾಗೆ ಮಾಡಿದರೆ ತನ್ನ ಮತಕ್ಕೆ ಬಹಳ ಹೆಚ್ಚಾದ ನಾಶಮಾಡುತ್ತಾನೆ.

ಆದ್ದರಿಂದ **ಸಮವಾಯವೇ ಸಾಧು.** ಎಂದರೆ, ಒಬ್ಬರು ಇನ್ನೊಬ್ಬರ ಧರ್ಮವನ್ನು ಶ್ರವಣಮಾಡಬೇಕು, ಶುಶ್ರೂಷೆಮಾಡಬೇಕು—ಎಂಬ ಇದೇ ದೇವಾನಾಂಪ್ರಿಯನ ಇಚ್ಛೆ. ಏನೆಂದರೆ, ಸರ್ವಮತಗಳವರೂ ಬಹುಶ್ರುತರಾಗಲಿ, ಕಲ್ಯಾಣವಾದ ಆಗಮಗಳುಳ್ಳವರಾಗಲಿ ಎಂಬುದೇ.

ತಮ್ಮತಮ್ಮದರಲ್ಲಿ ಪ್ರಸನ್ನರಾದವರಿಗೆ ಹೇಳತಕ್ಕದ್ದು: ಸರ್ವ ಮತಗಳ ಸಾರವೃದ್ಧಿಯಾಗಲಿ ಎಂಬುದನ್ನು ಹೇಗೋ ಹಾಗೆ ದಾನವನ್ನಾಗಲಿ ಪೂಜೆಯನ್ನಾಗಲಿ ದೇವಾನಾಂಪ್ರಿಯನು ಗಣಿಸುವುದಿಲ್ಲ.

ಇದಕ್ಕಾಗಿ ಬಹುವಾದ ಧರ್ಮಮಹಾಮಾತ್ರರನ್ನೂ ಸ್ತ್ರೀ ಅಧ್ಯಕ್ಷ ಮಹಾಮಾತ್ರರನ್ನೂ ವ್ರಜಭೂಮಿಕರನ್ನೂ ಇತರ ಅಧಿಕಾರಿಗಳನ್ನೂ ನಿಯಮಿಸಲಾಗಿದೆ.

ಇದರ ಫಲ ಇದು: ತನ್ನ ಮತದ ವೃದ್ಧಿಯೂ ಧರ್ಮದ ಬೆಳಗುವಿಕೆಯೂ ಆಗುತ್ತದೆ.

ಈ ಮೇಲಿನ ಶಾಸನದಲ್ಲಿ ಅಶೋಕನು ಪ್ರತಿಪಾದಿಸಿದ ಉದಾತ್ತವಾದ ಮಾರ್ಗವಾದರೂ ಆತನು ಬುದ್ಧನಿಂದ ಕಲಿತದ್ದೇ. **"ನ ಸಧಮ್ಮ ಒಕ್ಕಂಸನಾ, ನ ಪರಧಮ್ಮ ವಂಭನಾ"** ಎಂದರೆ "ಸ್ವಂತ ಧರ್ಮವನ್ನು ಹೊಗಳುವುದು ಬೇಡ, ಪರಧರ್ಮವನ್ನು ಅವಮಾನಿಸುವುದು ಬೇಡ" ಎಂದ ಬುದ್ಧನ ಮಾತಿನ ಅರ್ಥವನ್ನೇ ಅಶೋಕನು ಈ ಶಾಸನದಲ್ಲಿ ಇನ್ನಷ್ಟು ಸ್ಪಷ್ಟಮಾಡಿ ಪುಷ್ಟಿಗೊಳಿಸಿದ್ದಾನೆ.

೨

ಹೀಗೆ, ಕ್ರಿ. ಪೂ. ಮೂರನೆಯ ಶತಮಾನದಲ್ಲಿ "ಪ್ರಜೆಗಳೆಲ್ಲರೂ ನನ್ನ ಮಕ್ಕಳು" ಎಂಬ ಭಾವನೆಯಿಂದ, ಅವರ ಹಿತಸುಖಗಳನ್ನು ಸಾಧಿಸುವ ಸಲುವಾಗಿ, "ವಾಚೀಗುಪ್ತಿ"ಯನ್ನೂ (ಎಂದರೆ, ನಾಲಗೆ ಬಿಗಿಹಿಡಿದು ಮಾತನಾಡುವುದನ್ನೂ) "ಸಮವಾಯವೇ ಸಾಧು" (ಎಂದರೆ ಸಮರಸವೇ ಒಳ್ಳೆಯದು) ಎಂಬ ಮಹಾಮಂತ್ರವನ್ನೂ ಘೋಷಣೆಮಾಡಿದ ಆ ಪ್ರಾಚೀನ ಭಾರತದ ಅಶೋಕವಾಣಿ ನಮ್ಮ ಕನ್ನಡದಲ್ಲೂ ಒಮ್ಮೆ, ಕ್ರಿ. ಶ. ೧೨ನೆಯ ಶತಮಾನದಲ್ಲಿ "ಕೂಡಲ--ಸಂಗ"ನನ್ನು ತನ್ನ ಆರಾಧ್ಯದೈವವಾಗಿ ಇಟ್ಟುಕೊಂಡು ಲೋಕಕಲ್ಯಾಣ ಸಾಧನೆಗೆ ತೊಡಗಿದ ಬಸವಣ್ಣನವರ ಮುಖದಿಂದಲೂ ಒಮ್ಮೆ ಬಹು ಮುದ್ದಾಗಿ ಹನಿದುಬಂತು.

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿಯ ಬೇಡ" ಎಂಬ ಎಂದಿನ ಸಾಮಾನ್ಯ ಶಾಸನೆಗಳ ಜೊತೆಗೆ **"ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ"** ಎಂಬ ಅನನ್ಯಸಾಮಾನ್ಯವಾದ ಶಾಸನೆಯನ್ನೂ ಮಾಡಿ. **"ಇದೇ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ, ಇದೇ ನಮ್ಮ ಕೂಡಲ ಸಂಗನನೊಲಿಸುವ ಪರಿ"** ಎಂದು ಸ್ಫಟಿಕದ ಶಲಾಕೆಯಂತೆ ನಿರ್ಮಲ ವಾಗಿ ನೇರವಾಗಿ ಬಂದ ಈ ವಚನವು ಬಸವಣ್ಣನವರ ವಚನಗಳಿಗೆಲ್ಲ ಶಿಖಾರತ್ನವೆಂದು ನನ್ನ ವಿಶ್ವಾಸ.

ಅಂದು ಅವರ ಮಾತಿಗೆ ಕಿವಿಕೊಡದೆ, "ಕೂಡಲ--ಸಂಗ"ನನ್ನು ಒಲಿಸದೆ, 'ಕಲ್ಯಾಣ'ವನ್ನು ಕಳೆದುಕೊಂಡ ಕರ್ಣಾಟಕ ಇಂದಾದರೂ **"ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ"** ಎಂಬುದನ್ನು ಮರೆಯದೆ ಪಾಲಿಸಿಕೊಂಡರೆ, ನಿಜ ವಾಗಿಯೂ ನಾಡು ಕೂಡಲಾದೀತು, ಸಂಗ ಪಡೆದೀತು—ಎನ್ನಿಸುತ್ತದೆ. ಈ ಮೂರು ಅಂಗಗಳ ಮಂತ್ರದಿಂದ ವ್ಯಕ್ತಿಯ ಅಂತರಂಗ ಶುದ್ಧವಾದರೆ, ಅಂದು ನಾಡಿಗೆ ನಾಡೇ ಶುದ್ಧವಾಗಿ, ಅದು ಇಲ್ಲೇ ನಾಕ.

೩

ಹೀಗೆಯೇ 'ಅನ್ಯೋನ್ಯವಾದ ಅವಲಂಬನದಿಂದ ಉಭಯತ್ರ ಉಪಕಾರವಾಗುತ್ತದೆ' ಎಂಬ ದೃಢವಾದ ನಂಬಿಕೆಯನ್ನು ಪುನಃ ಕರ್ಣಾಟಕದಲ್ಲಿ, ೧೪ನೆಯ ಶತಮಾನದ ಒಂದು ಶಾಸನದಲ್ಲಿ ಕಾಣಬಹುದು. ಒಮ್ಮೆ ಜೈನರಿಗೂ ವೈಷ್ಣವರಿಗೂ ಏನೋ ಮನಸ್ತಾಪ ಬಂದಾಗ, 'ಭಕ್ತ'ರೆನ್ನಿಸಿಕೊಂಡ ವೈಷ್ಣವರು 'ಭವ್ಯ'ಜನರಾದ ಜೈನರಿಗೆ ಅನ್ಯಾಯವಮಾಡಿದಾಗ, ಆ ಕಾಲದಲ್ಲಿ ಆ ನಾಡಿನ ವೈಷ್ಣವರಾಜನಾದ ಬುಕ್ಕರಾಯನು ತನ್ನ ಪ್ರಜೆಗಳಿಗೆ ಬುದ್ಧಿಹೇಳಿ, ಅವರನ್ನು ತಿದ್ದಿಕೊಟ್ಟ ರೀತಿ ಇಂದಿಗೂ ಶ್ರವಣಬೆಳುಗೊಳದಲ್ಲೂ ಮೇಲುಕೋಟೆಯಲ್ಲೂ ಇರುವ ಎರಡು ಶಿಲಾಶಾಸನಗಳಿಂದ ವ್ಯಕ್ತವಾಗುತ್ತದೆ. 'ಸುಲಿದ ಬಾಳೆಯ ಹಣ್ಣಿನಂದದಿ' ಇರುವ ಆ ತಿಳಿಗನ್ನಡ ಶಾಸನವನ್ನು ಈ ಕೆಳಗೆ ಕಾಣಬಹುದು:—

[ಬುಕ್ಕರಾಯನ ಧರ್ಮಸಮದೃಷ್ಟಿ]

ಸ್ವಸ್ತಿ ಶ್ರೀಮನ್ಮಹಾಮಂಡಳೇಶ್ವರಂ ಅರಿರಾಯ ವಿಭಾಡ ಭಾಷೆಗೆ ತಪ್ಪುವ ರಾಯರ ಗಂಡ ಶ್ರೀ ವೀರಬುಕ್ಕರಾಯನು ಪೃಥ್ವೀರಾಜ್ಯವ ಮಾಡುವ ಕಾಲದಲ್ಲಿ ಜೈನರಿಗೂ ಭಕ್ತರಿಗೂ ಸಂವಾದವಾದಲ್ಲಿ. . . . ಸಮಸ್ತ ನಾಡ ಭವ್ಯಜನಂಗಳು ಆ ಬುಕ್ಕರಾಯಂಗೆ ಭಕ್ತರು ಮಾಡುವ ಅನ್ಯಾಯಂಗಳನು ಬಿನ್ನಹಂ ಮಾಡಲಾಗಿ. . . ಹದಿನೆಂಟು ನಾಡ ಶ್ರೀವೈಷ್ಣವರ ಕೈಯಲು ಮಹಾರಾಯನು ವೈಷ್ಣವದರ್ಶನಕ್ಕೆಯೂ ಜೈನದರ್ಶನಕ್ಕೆಯೂ ಭೇದವಿಲ್ಲವೆಂದು ರಾಯನು ವೈಷ್ಣವರ ಕೈಯಲು ಜೈನರ ಕೈವಿಡಿದುಕೊಟ್ಟು—ಈ ಜೈನದರ್ಶನಕ್ಕೆ ಪೂರ್ವಮರಿಯಾದೆಯಲು ಪಂಚಮಹಾವಾದ್ಯಂಗಳೂ ಕಳಸವೂ ಸಲುವುದು। ಜೈನದರ್ಶನಕ್ಕೆ ಭಕ್ತರ ದೆಸೆಯಿಂದ ಹಾನಿವೃದ್ಧಿಯಾದರೂ ವೈಷ್ಣವ ಹಾನಿವೃದ್ಧಿಯಾಗಿ ಪಾಲಿಸುವರು ಈ ಮರ್ಯ್ಯಾದೆಯಲು। ಎಲ್ಲಾ ರಾಜ್ಯದೊಳಗುಳ್ಳಂತಹ ಬಸ್ತಿಗಳಿಗೆ ಶ್ರೀವೈಷ್ಣವರು ಶಾಸನವ ನಟ್ಟು ಪಾಲಿಸುವರು। ಚಂದ್ರಾರ್ಕಸ್ಥಾಯಿಯಾಗಿ ವೈಷ್ಣವಸಮಯವೂ ಜೈನದರ್ಶನವೂ ರಕ್ಷಿಸಿಕೊಂಡು ಬಹೆವು। ವೈಷ್ಣವರೂ ಜೈನರೂ ಒಂದು ಭೇದವಾಗಿ ಕಾಣಲಾಗದು। ಶ್ರೀ ತಿರುಮಲೆಯ ತಾತಯ್ಯಂಗಳು ಸಮಸ್ತ ರಾಜ್ಯದ ಭವ್ಯಜನಂಗಳ ಅನುಮತದಿಂದ ಬೆಳುಗುಳದ ತೀರ್ಥದಲ್ಲಿ ವೈಷ್ಣವ ಅಂಗರಕ್ಷೆಗೋಸುಕ ಸಮಸ್ತ ರಾಜ್ಯದೊಳಗುಳ್ಳಂತಹ ಜೈನರ ಬಾಗಿಲುಕಟ್ಟಳೆಯಾಗಿ ಮನೆಮನೆಗೆ ವರ್ಷಕ್ಕೆ ೧ ಹಣಕೊಟ್ಟು ಆ ಎತ್ತಿದ ಹೊನ್ನಿಂಗೆ ದೇವರ ಅಂಗರಕ್ಷೆಗೆ ಯಿಪ್ಪತ್ತಾಳನೂ ಸಂತನಿಟ್ಟು ಮಿಕ್ಕ ಹೊನ್ನಿಂಗೆ

ಜೀರ್ಣ ಜಿನಾಲಯಂಗಳಿಗೆ ಸೊದೆಯುಸಿಕ್ಕುವುದು । ಈ ಮರಿಯಾದೆಯುಲು ಚಂದ್ರಾರ್ಕರುಳ್ಳನ್ನಂ ತಪ್ಪಲೀಯದೆ ವರ್ಷವರ್ಷಕ್ಕೆ ಕೊಟ್ಟು ಕೀರ್ತಿಯುನೂ ಪುಣ್ಯವನೂ ಉಪಾರ್ಜಿಸಿಕೊಂಬುದು । ಈ ಮಾಡಿದ ಕಟ್ಟಳೆಯನು ಆವನೊಬ್ಬನು ಮೀರಿದವನು ರಾಜದ್ರೋಹಿ । ಸಂಘಸಮುದಾಯಕ್ಕೆ ದ್ರೋಹಿ । ತಪಸ್ವಿಯಾಗಲಿ ಗ್ರಾಮಿಣಿಯಾಗಲಿ ಈ ಧರ್ಮವ ಕೆಡಿಸಿದರಾದಡೆ ಗಂಗೆಯ ತಡಿಯಲ್ಲಿ ಕಪಿಲೆಯನೂ ಬ್ರಾಹ್ಮಣನನೂ ಕೊಂದ ಪಾಪದಲ್ಲಿ ಹೋಹರು ।

೪

ಈ ಪ್ರಕಾರವಾಗಿ ಕ್ರಿಸ್ತಪೂರ್ವದಿಂದ ಹಿಡಿದು ಕ್ರಿಸ್ತಶಕದ ಉದ್ದಕ್ಕೂ ಆಗತ್ಯಬಿದ್ದ ಕಾಲದಲ್ಲಿ ಮತ್ತೆಮತ್ತೆ ಎದ್ದ ಈ ಸಮರಸದ ಅವಶ್ಯಕತೆಯ ಕೂಗು ಈ ಗಾಂಧೀಯುಗದಲ್ಲಿ ತಾನೇ ತಾನಾಗಿ ಸರ್ವತ್ರ ಕೇಳಿಬರುತ್ತಿದೆ. **"ರಸವೆ ಜನನ, ವಿರಸ ಮರಣ, ಸಮರಸವೇ ಜೀವನ"** ಎಂದ ನಮ್ಮ ಕನ್ನಡ ಕವಿವಾಣಿಯಾದರೂ ಈ ಉದ್ಘೋಷದ ಮಹಾಸ್ರೋತದ ಒಂದು ಸೀಳು. ಆದರೂ "ಊರ್ಧ್ವಬಾಹುರ್ವಿರೋಮ್ಯೇಷ ನ ಕಶ್ಚಿತ್ ಶೃಣೋತಿ ಮಾಂ" ಎಂದು ಭಗವಾನ್ ವ್ಯಾಸರು ಹಿಂದೆ ಹೇಳಿದ ಹಾಗೆಯೇ ಈಗಲೂ ಇಷ್ಟು ಮೊರೆಯಿಡುತ್ತಿದ್ದರೂ ಈ 'ಸಮರಸವೇ ಜೀವನ' ಎಂಬುದನ್ನು ಕೇಳುವವರಿಲ್ಲವಲ್ಲ ಎಂದೂ ಒಮ್ಮೊಮ್ಮೆ ನಿರಾಸೆ ತಲೆಯೆತ್ತುವುದು ಸಹಜ. ಆದರೆ ಒಡನೆಯೇ ಪಂಚತಂತ್ರದ ಸುಭಾಷಿತವೊಂದು ನೆನಪಿಗೆ ಬರುತ್ತದೆ :—

ಉದ್ಯೋಗಿನಂ ಪುರುಷಸಿಂಹಮುಪೈತಿ ಲಕ್ಷ್ಮೀಃ
ದೈವೇನ ದೇಯಮಿತಿ ಕಾಪುರುಷಾ ವದಂತಿ
ದೈವಂ ನಿಹತ್ಯ ಕುರು ಪೌರುಷಮಾತ್ಮಶಕ್ತ್ಯಾ
ಯತ್ನೇ ಕೃತೇ ಯದಿ ನ ಸಿಧ್ಯತಿ ಕೋಽತ್ರದೋಷಃ

ಎಂದರೆ "ಉದ್ಯೋಗ ಮಾಡುವ ಪುರುಷಸಿಂಹನಿಗೆ ಲಕ್ಷ್ಮಿ ಪ್ರಾಪ್ತವಾಗುತ್ತಾಳೆ. ದೈವವು ಅದನ್ನು ಕೊಡುತ್ತದೆಯೆಂದು ಪೌರುಷ ಕೆಟ್ಟವರು ಹೇಳುತ್ತಾರೆ. ದೈವವನ್ನು ಅಡಗಿಸಿ, ಆತ್ಮಶಕ್ತಿಯಿಂದ ಪೌರುಷವನ್ನು ತೋರು. ನಡೆಸಿದ ಯತ್ನದಲ್ಲಿ ಸಿದ್ಧಿಯಾಗದೆ ಹೋದರೆ, ಅದರಲ್ಲಿ ಏನು ದೋಷ?"

ನಿಜವೇ! "ಯತ್ನೇ ಕೃತೇ ಯದಿ ನ ಸಿಧ್ಯತಿ ಕೋಽತ್ರದೋಷಃ!"

# ಗಾಂಧಿಯುವರ ಕಥೆ

ಅಥವಾ

## ನಾವು ಕಮಲ ಎಂದುಕೊಂಡ ಕೆಂಡ

ರಾತ್ರಿರ್ಗಮಿಷ್ಯತಿ, ಭವಿಷ್ಯತಿ ಸುಪ್ರಭಾತಂ,
ಭಾಸ್ವಾನುದೇಷ್ಯತಿ, ಹಸಿಷ್ಯತಿ ಪಂಕಜಶ್ರೀಃ,
ಇತ್ಥಂ ವಿಚಿನ್ತಯತಿ ಕೋಶಗತೇ ದ್ವಿರೇಫೇ
ಹಾ ಹನ್ತ ಹನ್ತ ನಳಿನೀಂ ಗಜಮುಜ್ಜಹಾರ !

ಒಂದು ಕೊಳದಲ್ಲಿ ಒಂದು ಕಮಲ ಇತ್ತಂತೆ. ಅದರೊಳಗೆ ಒಂದು ದುಂಬಿ ಬಂದು ಕುಳಿತುಕೊಂಡಿತಂತೆ. ಸಂಜೆ ಆಗುತ್ತಾ ಬಂದಾಗ ಕಮಲ ಬಾಗಿಲು ಮುಚ್ಚಿಕೊಂಡಿತಂತೆ. ದುಂಬಿ ಒಳಗೆ ಸಿಕ್ಕಿಕೊಂಡರೂ ಧೈರ್ಯವಾಗಿಯೇ ಇದ್ದಿತಂತೆ. "ರಾತ್ರಿ ಎನ್ನುವುದು ಕಳೆದೇ ಕಳೆಯುತ್ತದೆ. ಬೆಳಗು ಆಗಿಯೇ ಆಗುತ್ತದೆ. ಸೂರ್ಯ ಹುಟ್ಟಿಯೇ ಹುಟ್ಟುತ್ತಾನೆ. ಕಮಲ ಅರಳಿಯೇ ಅರಳುತ್ತದೆ. ಆಗ ನಾನು ಖಂಡಿತವಾಗಿಯೂ ಹೊರಗೆ ಬರಬಹುದು" ಎಂದುಕೊಂಡಿತ್ತು. ಆದರೆ.... ಬೆಳಗಿನ ಜಾವದ ವೇಳೆಗೆ, ಕಮಲ ಇನ್ನೂ ಅರಳುವುದಕ್ಕೆ ಮುಂಚೆಯೇ, ಒಂದು ಆನೆ ಬಂದಿತಂತೆ. ಸೊಂಡಿಲು ಹಾಕಿ, ಬುಡಸಮೇತ ಆ ಕಮಲವನ್ನು ಕಿತ್ತುಕೊಂಡೇ ಹೋಯಿತಂತೆ !

ಹೀಗಾಯಿತು ನಮ್ಮ ಗಾಂಧಿಯುವರ ಕಥೆ !

ನಮ್ಮಲ್ಲಿ ಅನೇಕರು ಬೆಳ್ಳಗಿದ್ದದ್ದೆಲ್ಲಾ ಹಾಲು ಎಂದು ನಂಬುವ ಹುಂಬರು. ನಮ್ಮಲ್ಲಿ ಅನೇಕರ ಕಣ್ಣಿಗೆ—ಶುಕ್ರನ ಜೊತೆಯಲ್ಲಿ ಶನಿ ಕುಳಿತುಕೊಂಡ ಕಣ್ಣಿಗೆ—ಕೆಂಪಗೆ ಕಂಡದ್ದೆಲ್ಲಾ ಕಮಲ. ಕಮಲವೂ ಕೆಂಪಗಿರುತ್ತದೆ, ಕೆಂಡವೂ ಕೆಂಪಗಿರುತ್ತದೆ—ಎಂಬುದನ್ನು ಕಾಣದು, ಸ್ವಾರ್ಥದಿಂದ ಸಂಕೋಚವಾದ ಮೂರ್ಖಮನಸ್ಸು. ಇದು ಹಿಂದೂ-ಅದು ಮುಸ್ಲಿಂ, ಇದು ಸವರ್ಣ-ಅದು ಅವರ್ಣ, ಇದು ಬ್ರಾಹ್ಮಣ-ಅದು ಅಲ್ಲ, ಇದು ಇದು-ಅದು ಅದು, ಇದು ಲೊಟ್ಟೆ-ಅದು ಲೊಸ್ಕು, ಇದು ಹಾಳು-ಅದು ಮೂಳು ಎಂಬುದಾಗಿ ಹೀಗೆ ಹತ್ತಾರು ನೂರಾರು

ಛಿನ್ನಾಛಿದ್ರವಾಗಿ ಅರಳಿ ಬಿರಿದು ಕೆರಳಿದ್ದ ಈ ಕೆಂಡದ ಹರವನ್ನೇ ನಮ್ಮಲ್ಲಿ ಹಲವರು ಕಮಲದ ಚೆಲುವೆಂದು ಭ್ರಮಿಸಿದ್ದೆವು.

ಕಥೆಯಲ್ಲಿ ಕೇಳಿದ ಕಮಲದ ಒಳಕ್ಕೆ ಹೋಗಿ ನಿಶ್ಚಿಂತೆಯಿಂದ, ಬೆಳಗಾಗುವುದೆಂಬ ಭರವಸೆಯಿಂದ, ದುಂಬಿ ಎದುರುನೋಡುತ್ತಿದ್ದ ಹಾಗೆಯೇ ಗಾಂಧಿಯವರೂ ಈ ಕೌಮಿಾಕೆಂಡದ ಕಮಲದ ನಡುವಿಗೆ ಹೋಗಿ, ಉರಿಯುವ ಕೆಂಡ ಆರಿ ಶಾಂತವಾದೀತೆಂಬ ನಿರೀಕ್ಷೆಯಲ್ಲಿ ಇದ್ದರು.

ಕಥೆಯಲ್ಲಿ ಕೇಳಿದ ದುಂಬಿ ಕನಸು ಕಾಣುತ್ತಿದ್ದ ಹಾಗೆಯೇ ಅವರೂ ಅಂದುಕೊಳ್ಳುತ್ತಿದ್ದರು: "ಈ ಕತ್ತಲೆ ಸದಾ ಹೀಗೆ ಇರತಕ್ಕದ್ದಲ್ಲ. ಬೆಳಕು ಬಂದೇ ಬರುತ್ತದೆ. ಬಂದೇ ಬರಬೇಕು" ಎಂದು. ಗಾಂಧಿಯವರ ಸುತ್ತಲೂ ಈ ಕೌಮಿಾಕೆಂಡ ಮುಚ್ಚಿಕೊಂಡಾಗಲೂ "ಇದು ಕಮಲವಲ್ಲ, ಇದು ಕೆಂಡ" ಎಂದು ಕಣ್ಣುಬಿಟ್ಟ ನಾವಾದರೂ ಅದೇ ಆಸೆ ಇಟ್ಟುಕೊಂಡಿದ್ದೆವು: "ಈ ಬೆಂಕಿ ಆರಲೇಬೇಕು. ಗಾಂಧಿಯವರಲ್ಲದೆ ಬೇರೆ ಯಾರು ಆರಿಸಬೇಕು?" ಎಂದು.

ಆದರೆ....ರೆ ಎಂಬ ರಾಜನದೇ ತಾನೆ ಎಲ್ಲದರಲ್ಲಿಯೂ ಕಡೆಯ ಮಾತು!....ಕಥೆಯಲ್ಲಿ ಕೊಳದ ಹತ್ತಿರ ಕರಿಯ ಆನೆ ಬಂದ ಹಾಗೆ ಕಾಲಯಮ ಇಲ್ಲಿ ತಾನು ಬಂದ. ಕಮಲವನ್ನು ಬುಡಸಹಿತವಾಗಿ ಎತ್ತಿಕೊಂಡದ್ದರ ಜೊತೆಗೆ ಅದರೊಳಗಿದ್ದ ದುಂಬಿಯನ್ನೂ ಹೊಟ್ಟೆಗೆ ಹಾಕಿಕೊಂಡ ಆ ಆನೆಯ ಹಾಗೆಯೇ ಈ ಯಮನೂ ದುಂಬಿಯ ಹಾಗಿದ್ದ ಗಾಂಧಿಯವರನ್ನು ತನ್ನ ಹೊಟ್ಟೆಗೆ ಹಾಕಿಕೊಂಡ.

ಗಾಂಧಿಯವರನ್ನು ದುಂಬಿ ಎಂದೆನೇ? ಹೌದು, ದುಂಬಿಯೇ! ಭಗವಂತನಾದ ಬುದ್ಧನು ಒಂದು ಕಡೆ ಅನಾಸಕ್ತನಾದ ಮುನಿಯನ್ನು ವರ್ಣಿಸುವಾಗ ಮುನಿಯನ್ನು ದುಂಬಿಗೆ ಹೋಲಿಸುತ್ತಾನೆ:

ಯಥಾಪಿ ಭಮರೊ ಪುಪ್ಫಂ ವಣ್ಣಗನ್ಧಂ ಅಹೇಠಯಂ
ಪಲೇತಿ ರಸಮಾದಾಯ ಏವಂ ಗಾಮೇ ಮುನೀ ಚರೇ

"ದುಂಬಿ ಹೂವುಗಳ ಹತ್ತಿರ ಬರುತ್ತದೆ. ಆದರೆ ಆ ಹೂವಿನ ಬಣ್ಣವನ್ನಾಗಲಿ ಗಂಧವನ್ನಾಗಲಿ ಘಾಸಿ ಮಾಡುವುದಿಲ್ಲ. ಅದರಲ್ಲಿ

ತನಗೆ ಬೇಕಾದ ರಸವನ್ನು ಮಾತ್ರ ತೆಗೆದುಕೊಂಡು, ಆ ಹೂವಿನಲ್ಲಿ ನಿಲ್ಲದೆ ಬೇರೆ ಹೂವಿಗೆ ಓಡುತ್ತದೆ. ಮುನಿಯಾದವನು ಕೂಡ ಹೀಗೆಯೇ ತಾನು ಭಿಕ್ಷೆಗಾಗಿ ಗ್ರಾಮದಲ್ಲಿ ಯಾವ ಯಾವ ಮನೆಗೆ ಹೋದರೂ ಭ್ರಮರದಂತೆ ರಸಗ್ರಹಣೆಯಷ್ಟರಲ್ಲಿಯೇ ತೃಪ್ತನಾಗಿರಬೇಕಲ್ಲದೆ ಅಲ್ಲಿನ ವರ್ಣಗಂಧಗಳ ಗೋಜಿಗೆ ಹೋಗಬಾರದು" ಎಂಬ ಈ ಗಾಥಾಪದದಲ್ಲಿರುವ ಭ್ರಮರಚರ್ಯೆಯು ಗಾಂಧಿಯವರ ಜೀವನದಲ್ಲಿ, ಮುಖ್ಯವಾಗಿ ಅವರು ವಿವಿಧಮತಗಳ ಸಾರವನ್ನು ಸಂಗ್ರಹಿಸಿ ತಂದ ಕ್ರಮದಲ್ಲಿ ಚೆನ್ನಾಗಿ ಸ್ಪಷ್ಟವಾಗಿ ಪ್ರಕಟವಾಗಿತ್ತು.

ಇಂತಹ ದುಂಬಿಯನ್ನು ಬಾಯಿಗೆ ಹಾಕಿಕೊಂಡು, ಈ ಅಪೂರ್ವವಾದ ಗಾಂಧೀರುಚಿಯನ್ನು ಕಂಡ ಯಮನಾದರೂ ಅವರನ್ನು ತಿರುಗಿ ಈಚೆ ಬಿಡುವಂತಿಲ್ಲ. ಆದರೂ ಒಳಗಿದ್ದ ದುಂಬಿಯ ಜೊತೆಯಲ್ಲಿ ಹೊರಗಿನ ಕಮಲವನ್ನೂ ಬುಡಸಮೇತವಾಗಿ ಬಾಯಿಗೆ ಹಾಕಿಕೊಂಡು, ಅಗಿದು, ಹೊಟ್ಟೆಯಲ್ಲಿ ಅರಗಿಸಿಕೊಂಡು, 'ವಾತಾಪಿ ಜೀರ್ಣೋಭವ' ಎಂದು ಆ ಕಥೆಯಲ್ಲಿ ಆನೆ ಹೇಳಿದ ಹಾಗೆಯೇ ಗಾಂಧಿಯವರನ್ನು ಕಬಳಿಸಿದ ಆ ಕಾಲನ ಬಸಿರಿನಲ್ಲಿಯೇ ಈ ಕೌಮಿಾಕೆಂಡವೂ ಉರಿದು ಬೂದಿಯಾಗಿ ಹೋದರೆ! ಪುನಃ ಈ ಕೌಮಿಾವಾತಾಪಿ ಕಾಲನ ಗರ್ಭವನ್ನು ಭೇದಿಸಿಕೊಂಡು ಬಾರದೆ ಹೋದರೆ! ಆಗ ಗಾಂಧಿಯವರ ಈ ದಾರುಣವಾದ ಸಾವು ಸರ್ವಥಾ ನಿಷ್ಫಲವಲ್ಲ!

ಏನೋ ಯಾರು ಬಲ್ಲರು! ಕೆಂಡವನ್ನೇ ಕಮಲವೆಂದುಕೊಂಡಿದ್ದ ನಮ್ಮ ದೃಷ್ಟಿದೋಷವನ್ನು ನೀಗುವುದಕ್ಕಾಗಿಯೇ ಗಾಂಧಿಯವರು ಹೀಗೆ ಆಹುತಿಯಾಗಿ ಅಂಜನವಾದರೋ! ಅಥವಾ, ಕೆಸರಿನಲ್ಲಿ ಹುಟ್ಟಿ, ಜನರ ಕಣ್ಮನಸ್ಸುಗಳಿಗೆ ಮೋಹವನ್ನು ಮುಸುಕುತ್ತಿದ್ದು, ಚಂಚಲೆಯಾದವಳಿಗೆ ಆವಾಸಸ್ಥಾನವೆನ್ನಿಸಿದ ಕಮಲವೆಂದೇ ನಮಗೆ ಭ್ರಮೆಯಾಗಿದ್ದುದನ್ನು ಕೊಂಡೊಯ್ದು ನಮ್ಮನ್ನು ಕಾಪಾಡುವುದಕ್ಕಾಗಿ ಭ್ರಮರವು ತಾನೇ ಆತ್ಮಾರ್ಪಣೆ ಮಾಡಿಕೊಂಡಿತೋ! ಯಾರು ಬಲ್ಲವರು!

# ಸ್ವತಂತ್ರಭಾರತದ ವರ್ಷವರ್ಧಂತಿ

## ಒಂದು ಆಪ್ತವಾಕ್ಯ ಪರಂಪರೆ

ಯ ಏಕೋಽವರ್ಣೋ ಬಹುಧಾ ಶಕ್ತಿಯೋಗಾತ್
ವರ್ಣಾನನೇಕಾನ್ ನಿಹಿತಾರ್ಥೋ ದಧಾತಿ
ವಿಚೈತಿ ಚಾನ್ತೇ ವಿಶ್ವಮಾದೌ ಚ ದೇವಃ
ಸ ನೌ ಬುದ್ಧ್ಯಾ ಶುಭಯಾ ಸಂಯುನಕ್ತು

ಭಾರತವು ಸ್ವತಂತ್ರವಾಗಿ, ಮೊದಲನೆಯ ಹನ್ನೆರಡು ತಿಂಗಳು ತುಂಬಿ, ಎರಡನೆಯ ವರ್ಷ ಆರಂಭವಾಗಿರುವ ಈ ವರ್ಷವರ್ಧಂತಿಯ ದಿವಸ, ಮೇಲೆ ಹೇಳಿದ ಉಪನಿಷತ್ ಮಂತ್ರದಲ್ಲಿ ನಿವೇದಿಸಿದ ಕೋರಿಕೆ ಗಿಂತ ಹೆಚ್ಚಿನ ಕೋರಿಕೆ, ನಮ್ಮ ಸದ್ಯದ ಸ್ಥಿತಿಯಲ್ಲಿ, ಇನ್ನೊಂದಿಲ್ಲ.

"ಯಾವಾತನು, ಆದಿಯಲ್ಲಿ, ತಾನು ಏಕನಾದವನು, ಅವರ್ಣ ನಾದವನು, ತನ್ನ ಶಕ್ತಿಯೋಗದಿಂದ, ಉದ್ದೇಶವಿಟ್ಟು, ಅನೇಕವಾದ ವರ್ಣಗಳನ್ನು ಬಹುಪ್ರಕಾರದಿಂದ ಸೃಷ್ಟಿಸುವನೋ; ಕೊನೆಯಲ್ಲಿ ವಿಶ್ವ ವನ್ನು ನಾಶಗೊಳಿಸುವನೋ; ಆ ದೇವನು ಶುಭವಾದ ಬುದ್ಧಿಯನ್ನು ನಮಗೆ ಹೊಂದಿಸಲಿ" ಎಂಬುದು ಮೇಲಿನ ಮಂತ್ರದ ಅರ್ಥ.

೧

ದೇಶವೆಲ್ಲಕ್ಕೂ ಶುಭವಾಗತಕ್ಕಂತಹ ಬುದ್ಧಿ ನಮಗೆ ಬರಬೇಕು ಎಂಬುದು ಸಾರ್ವತ್ರಿಕವಾದ ಕೋರಿಕೆ. ಕಳೆದ ವರ್ಷ ಸ್ವಾತಂತ್ರ್ಯ ನಮಗೆ ಬಂದ ದಿವಸ ಶ್ರೀ. ಡಿ. ವಿ. ಜಿ. ಅವರು ಇಪ್ಪತ್ತುನಾಲ್ಕು ವೃತ್ತ ಗಳ ಒಂದು 'ಅಭಿನಂದನಸ್ತವ'*ವನ್ನು ಹಾಡಿದರು. ಅದರ ಅನೇಕ ಮಾತು ಸ್ಮರಣಯೋಗ್ಯ, ಮನನಯೋಗ್ಯ, ಆಚರಣಯೋಗ್ಯ.

"ಶ್ರೀರಸ್ತು. ಸ್ವಸ್ತಿ. ಮಾತೇ. . . . ಪಾರಕ್ಯಾಕ್ರಾಂತಿ ಈಗಳ್ ಪರಿದುದು . . . . ಜನತಾರಾಜ್ಯಂ ಅಭೂತಪೂರ್ವಸುಕೃತಂ ತಾನ್ ಇಂದು ಸಂದಿರ್ಪುದೌ. ಜನನೀ ನೀನ್ ಆದು ನಿಲ್ಪವೋಲ್ ಕರುಣಿಸೌ

* ಸ್ವತಂತ್ರಭಾರತ ಅಭಿನಂದನಸ್ತವ:—ಡಿ. ವಿ. ಜಿ. ಕರ್ಣಾಟಕ ಪ್ರಕಟನಾ ಲಯ, ಬೆಂಗಳೂರು: ೧೯೪೭.

ಚೈತನ್ಯನೈರ್ಮಲ್ಯಮಂ." ಬ್ರಿಟಿಷರನ್ನು ಕಳುಹಿಕಳೆದದ್ದು ದೊಡ್ಡದೇ. ಸ್ವತಂತ್ರರು ಆದದ್ದು ದೊಡ್ಡದೇ. ಆದರೆ ಆ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುವುದೂ ಉಳಿಸಿಕೊಳ್ಳುವುದಕ್ಕೆ ಅಗತ್ಯವಾದ ತ್ರಿಕರಣಶುದ್ಧಿಯನ್ನು ಗಳಿಸಿಕೊಳ್ಳುವುದೂ ಅದಕ್ಕಿಂತ ದೊಡ್ಡದು.

ಆದರೆ **'ಸ್ವತಂತ್ರ'** ಎಂಬುದರಲ್ಲಿ **'ಸಂಯಮ'** ಎಂಬುದೂ ಕೂಡಿಯೇ ಇರಬೇಕು ಎಂಬುದನ್ನು ಅರಿತಿದ್ದರೂ, ಅದನ್ನು ಆಡಿದರೂ, ಕಾರ್ಯದಲ್ಲಿ ಅದನ್ನು ಕಾಣುತ್ತಿಲ್ಲ. "ನಿಯಮ ಸ್ವಾತಂತ್ರ್ಯಗಳ್ ತಾಂ ಸಮಹಿತಗತಿಯಿಂದೆ ಅಂತು ಸೇರ್ದುದು ಧರ್ಮಂ." ಹಿಡಿಯಬೇಕಾದಲ್ಲಿ ಹಿಡಿಯಬೇಕು, ಸಡಿಲಿಸಬೇಕಾದಲ್ಲಿ ಸಡಿಲಿಸಬೇಕು. ಇದು ಸಮನಾಗಿ ನಡೆದರೆ ಮಾತ್ರ 'ಸ್ವತಂತ್ರ'ವೆಂಬ ಹೆಸರು ಸಾರ್ಥಕ. ಈ ಸೂಕ್ಷ್ಮವನ್ನು ತಿಳಿದವರಿಗೆ ಯಾವ ಭಯವೂ ಇಲ್ಲ. ಇದನ್ನು ನಾವು ತಿಳಿದಿಲ್ಲವೆಂದಲ್ಲ; ಇದು ನಮ್ಮಲ್ಲಿ ನಡತೆಯಾಗಿ ರೂಪುಗೊಂಡಿಲ್ಲ, ಅಷ್ಟೆ. "ಭಯಮೇನ್—ಆ ಸೂಕ್ಷ್ಮಮಂ ನಾಮ್ ಅರಿತಿರೆ? ಜನನೀ, ತತ್ತ್ವಮಂ ರೂಪಿಸು ಎಮ್ಮೊಳ್." ತಾಯಿ ನಮಗೆ ಸದ್ಬುದ್ಧಿ ಕೊಡಬೇಕು.

ಹಾಗಾದರೆ ಈಗ ನಮಗೆ ಬಂದಿದೆ ಎನ್ನುವ ಈ 'ಸ್ವತಂತ್ರ' ಸ್ಥಿತಿಗೆ ಏನು ಅರ್ಥ? ಎಷ್ಟು ಅರ್ಥ?

ಅರ್ಥ ಇಷ್ಟೆ: "ಪರತಂತ್ರಂ ಪೊಗೆಯ ಒಡ್ಡಿನಂತೆ ವದನದ್ವಾರಂಗಳಂ ಮುತ್ತಿರಲ್, ಶಿರವ ಎತ್ತಲ್ಕೆ ಎಡೆ ಆಗದಂತೆ ಪರದರ್ಪ ಆಕ್ರಾಂತಿ ಒತ್ತುತ್ತೆ ಇರಲ್—ಮರೆಯೊಳ್ ಕುಗ್ಗದೆ ಆತ್ಮಗುಣಂ? ಉಚ್ಛ್ವಾಸಯಂ ಜನಕ್ಕೆ ಇರ್ಕುಮೇಂ? ಪರಿಪೂರ್ಣಾಂಗತೆ ಎಂತು ಜೀವನಕೆ? ನೋಡು, ಇಂದು ಅಸ್ತಮಾಯ್ತು ಆ ಭಯಂ." ಇನ್ನೊಬ್ಬರಿಗೆ ಅಡಿಯಾಳಾಗಿರುವವರೆಗೆ, ಕಣ್ಣಿಗೆ ಮೂಗಿಗೆ ಗಂಟಲಿಗೆ ಹೊಗೆ ಕವಿದಹಾಗೆ, ಜೀವಕ್ಕೆ ತುಂಬ ಸಂಕಟ. ಇತರರು ದರ್ಪದಿಂದ ತುಳಿಯುತ್ತಿದ್ದರೆ, ತಲೆಯೆತ್ತುವುದು ಅಸಾಧ್ಯ; ಜನರಿಗೆ ಅಭಿವೃದ್ಧಿಯಿಲ್ಲ; ಬದುಕು ಬೆಳೆದು ತುಂಬಿಕೊಳ್ಳಲು ಅವಕಾಶವಿಲ್ಲ. ಆದರೆ ಈಗ 'ಪರತಂತ್ರ' ಹೋಗಿ 'ಸ್ವತಂತ್ರ ಬಂದಿರುವುದರಿಂದ ಈ ಭಯ ತಪ್ಪಿತು.

ಈಗ ನಮಗೆ ಬಂದಿರುವುದು ಸ್ವಾತಂತ್ರ್ಯದ ಮೊದಲನೆಯ ಫಲ. "ಮಹಾಸತ್ತ್ವರ ಆ ಪುಣ್ಯೌಘದ್ರುಮದೊಳ್ ಇಂದು ಫಲಾರಂಭಂ." ಹಿರಿಯರ ಪುಣ್ಯದರಾಶಿಯೆಂಬ ಮರದಲ್ಲಿ ಈಗ ಫಲಬಿಡತೊಡಗಿದೆ. "ಇನ್ನು, ಈ ನಿನ್ನ ಕುಟುಂಬದ ಪ್ರಜೆಯೊಳು ಅನ್ಯೋನ್ಯ ಅಂಗಿತಾ ಭಾವದಿಂ ಭಿನ್ನಂ ಪಾರುಗೆ." ಐಕಮತ್ಯಕ್ಕೆ ಅಡ್ಡಿಯಾಗಿದ್ದ ಹೊರಗಿನ ಕಾರಣಗಳನ್ನು ಕಳೆದದ್ದರಿಂದ ಏಕತೆಯನ್ನು ಸಾಧಿಸಲು ಅನುಕೂಲ ವಾಗಿದೆ. ಅದನ್ನು ಸಾಧಿಸಿ, "ಮಾತೃಪಾದಭಜನ ಏಕ ಆವಿಷ್ಟರ್ ಅಕ್ಕೆ ಎಲ್ಲರುಂ." ಎಲ್ಲರೂ ತಾಯಿಯ ಸೇವೆಯಲ್ಲಿ, ಅದು ಒಂದರಲ್ಲೇ, ತನ್ಮಯರಾಗಲಿ.

ಇಂತಹ ಸದ್ಬುದ್ಧಿ ನಮಗೆ ಬರಲಿ ಎಂದೇ ಆದಿಯಲ್ಲಿ ಪ್ರಾರ್ಥನೆ ಮಾಡಿದ್ದು: "ಸ ನೌ ಬುದ್ಧ್ಯಾ ಶುಭಯಾ ಸಂಯುನಕ್ತು."

೧೯೩೦ನೇ ವರ್ಷದಿಂದ ಪ್ರತಿ ಜನವರಿ ಇಪ್ಪತ್ತಾರನೆಯ ದಿವಸವೂ ದೇಶವು ಒಂದು ಸ್ವಾತಂತ್ರ್ಯ ಪ್ರತಿಜ್ಞೆಯನ್ನು ಪುನಃ ಪುನಃ ಕೈಗೊಳ್ಳು ತ್ತಿತ್ತು. ಈ ಪ್ರತಿಜ್ಞೆಯಲ್ಲಿ "ನಾವು ಅನುಭವಿಸುತ್ತಿರುವ ಪಾರತಂತ್ರ್ಯ ದಿಂದ ನಮಗೆ ನಾಲ್ಕು ರೀತಿಯ ಮಹಾನಷ್ಟಗಳು ಸಂಭವಿಸಿವೆ. ರಾಜ ಕೀಯವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ, ಆಧ್ಯಾತ್ಮಿಕವಾಗಿ, ನಾವು ಕೆಳಗೆ ಬಿದ್ದಿದ್ದೇವೆ. ಈ ನಾಲ್ಕು ಮುಖಗಳಲ್ಲಿಯೂ ನಾವು ಉದ್ಧಾರವಾಗಬೇಕು" ಎಂದು ಹೇಳುತ್ತಿದ್ದೆವು. ಆಧ್ಯಾತ್ಮಿಕವಾದ ಉದ್ಧಾರಕ್ಕೆ ಮೂಲವೆನ್ನಿಸುವ ನಿರ್ಭೀತಿಯನ್ನು ಗಾಂಧೀಜಿ ದೇಶಕ್ಕೆ ಕಲಿಸಿಕೊಟ್ಟದ್ದರ ಪರಿಣಾಮವಾಗಿ, ದೇಶವು ಹೋರಾಡಿ, ರಾಜಕೀಯ ವಾಗಿ ಸ್ವತಂತ್ರವಾಯಿತು. ಆದರೆ ದೇಶದ ಆರ್ಥಿಕಸ್ಥಿತಿಯಾಗಲಿ ದೇಶ ದವರ ಸಂಸ್ಕೃತಿಯಾಗಲಿ ಮೇಲೆ ಏರುವ ಬದಲು ಕೆಳಮುಖವಾಗಿ ಹೋಗುತ್ತಿದೆ. ಇದು ನಿಂತು, ದೇಶವು ಅಭಿವೃದ್ಧಿಯ ಪಥದಲ್ಲಿ ಮುಂದು ವರಿಯಬೇಕಾದರೆ, ಜನರು ಎಲ್ಲರೂ ತಾವು ಒಂದು ಎಂಬ ಭಾವನೆ ಯನ್ನು ಬೆಳಸಿದರೆ ಮಾತ್ರ ಸಾಧ್ಯ.

ಈ ವರ್ಷವರ್ಧಂತಿಯ ದಿವಸ ನಾವು ಕೇಳಿಕೊಳ್ಳಬೇಕಾದದ್ದು— ಈ ಒಂದು ಸದ್ಬುದ್ಧಿಯನ್ನು.

೨

ನಾಡಿನ ಏಳಿಗೆಗೆ ಅತ್ಯವಶ್ಯಕವಾದ ಈ ಏಕತೆಯನ್ನು ನಮಗೆ ಸದಾ ನೆನಪುಕೊಡಲು ಸಮರ್ಥವಾದ ಸಾಧನಗಳೂ ನಮಗೆ ಪುಣ್ಯ ವಶದಿಂದ ದೊರಕಿವೆ. ಅವುಗಳನ್ನು ಸಾರ್ಥಕಪಡಿಸಿಕೊಳ್ಳಲು ಬೇಕಾದ ವಿವೇಕ ಮಾತ್ರ ನಮ್ಮಲ್ಲಿ ಇನ್ನೂ ಬೆಳೆಯಬೇಕು.

ಈ ಸಾಧನಗಳಲ್ಲಿ ಮೊದಲನೆಯದು ನಮ್ಮ **ರಾಷ್ಟ್ರಧ್ವಜ;** ಎರಡನೆಯದು ನಮ್ಮ **ರಾಷ್ಟ್ರಗೀತೆ.** 'ರಾಷ್ಟ್ರಗೀತೆ' ಎಂಬುದಕ್ಕಿಂತ 'ರಾಷ್ಟ್ರ ಗೀತೆಗಳು'* ಎಂದರೆ ಸತ್ಯಕ್ಕೆ ಹೆಚ್ಚು ಒಪ್ಪ.

ಇದೇ ಸಂದರ್ಭದಲ್ಲಿಯೇ ರಾಷ್ಟ್ರಭಾಷೆಯನ್ನೂ ಕುರಿತು ಒಂದು ಮಾತಾಡಿದರೆ ತಪ್ಪಾಗದು. ಒಂದು 'ರಾಷ್ಟ್ರಭಾಷೆ'ಯಾಗಬೇಕೆಂದು, ಅದು ಹಿಂದೂಸ್ತಾನಿ ಆಗಬೇಕೆಂದು, ವಾದಿಸುವವರು ಅದರಿಂದಲೂ ಜನರ ಏಕತೆಯನ್ನು ಸಾಧಿಸಬಹುದೆಂಬ ಸದಾಶಯದಿಂದಲೇ ವಾದಿಸುತ್ತಾರೆ. ಆದರೆ, ಎಲ್ಲಿಯವರೆಗೆ ಹಿಂದೂಸ್ತಾನಿಗೆ ಹೊರತಾದ ತಮಿಳು, ಕನ್ನಡ, ತೆಲುಗು, ಮಲೆಯಾಳ ಮುಂತಾಗಿ ಮಾತನಾಡುವ ಪ್ರದೇಶಗಳಲ್ಲಿ ವಲಸೆಬಂದು ನೆಲಸಿರುವ ಇತರ ಭಾಷೆ ಮಾತನಾಡುವ ಜನರು ಆಯಾ ಪ್ರದೇಶದ ಭಾಷೆಯನ್ನು ವ್ಯವಹರಿಸದೆ, ತಮ್ಮ ಹಿಂದಿ ಸಿಂಧಿ ಗುಜರಾತಿ ಮಾರವಾಡಿ ಮುಂತಾದುವಕ್ಕೆ ಮಾತ್ರ ಅಂಟಿಕೊಂಡಿರುವರೋ ಅಲ್ಲಿಯವರೆಗೂ ಈ 'ರಾಷ್ಟ್ರಭಾಷೆ' ಎಂಬುದು ಏಕತೆಗೆ ಕಾರಣವಾಗುವುದಿಲ್ಲ ಎಂಬುದು ಹಾಗಿರಲಿ; ಅದರಿಂದ ಇದುವರೆಗೆ ಇರುವ ಈ ಭಾಷೆಯ ಅನೈಕ್ಯತೆ ಮುಂದೆ ಭಾಷೆಯ 'ಪರದಪಾಕ್ರಾಂತಿ'ಯಾಗುವುದು ಖಂಡಿತ. ದಕ್ಷಿಣದವರು ನಾವು ಈ 'ರಾಷ್ಟ್ರಭಾಷೆ'ಯನ್ನು ಬೇಡವೆನ್ನುತ್ತಿಲ್ಲ. ಬೇಡವೆನ್ನುವವರು ಕೂಡ ಅಗತ್ಯಬಿದ್ದರೆ ತಾವಾಗಿಯೇ ಹುಡುಕಿಕೊಂಡು ಹೋಗಿ ಕಲಿಯುತ್ತಾರೆ. ಆದರೆ ಉತ್ತರದಿಂದ ಬಂದು ಇಲ್ಲಿ ನೆಲಸಿದವರು ತಾವು ನೆಲಸಿದ ಪ್ರದೇಶದ ಭಾಷೆಯೊಡನೆ ಆತ್ಮೀ

* ಈ ಗೀತೆಗಳ ಮೂಲವನ್ನೂ ಅನುವಾದವನ್ನೂ **'ನಮ್ಮ ಬಾವುಟ'**: ಜಿ. ಪಿ. ರಾಜರತ್ನಂ, ಹಿಂದ್ ಕಿತಾಬ್ಸ್, ಬೆಂಗಳೂರು, ೧೯೪೮, ಇದರಲ್ಲಿ ನೋಡಬಹುದು.

ಯತೆಯನ್ನು ಬೆಳಸದೆ ಹೋದರೆ, ಆದೂ ಒಂದು ರೀತಿಯ ದೇಶ ದ್ರೋಹವಾಗುತ್ತದೆ ಎಂಬುದನ್ನು ಅವರಿಗೆ ಆಪ್ತೇಷ್ಟರಾದವರು ತಿಳಿಸಿ, ದೇಶಕ್ಕೆ ಉಪಕಾರಮಾಡಬೇಕು.

ಇಲ್ಲದುದರ ವಿಷಯ ಇಷ್ಟು ಸಾಕು. ಇರುವವುಗಳನ್ನು ಕುರಿತು ನೋಡೋಣ.

**ಮೊದಲನೆಯದು—ನಮ್ಮ ರಾಷ್ಟ್ರಧ್ವಜ:** ಹಸಿರು, ಬಿಳುಪು, ಕೇಸರಿಗಳ ತ್ರಿವರ್ಣಧ್ವಜ; ಬಿಳಿಯ ಒಡಲಿನ ನಡುವೆ ನೀಲಿಯ ಚಕ್ರ.

ನಮ್ಮ ದೇಶಕ್ಕೆ ಈಗ ಅತ್ಯಂತ ಅಗತ್ಯವಾದದ್ದು—ಸರ್ವ ಸಂಪತ್ ಸಮೃದ್ಧಿ, ಆದರ ಸಂರಕ್ಷಣೆ, ಆದರ ಸರಿಯಾದ ವಿನಿಯೋಗ. ಈ ಮೂರೂ ಎಡೆಬಿಡದೆ ನಡೆಯುತ್ತಿರಬೇಕೆಂಬುದಕ್ಕೆ ಗುರುತಾಗಿ ಈ ಮೂರು ಬಣ್ಣಗಳು, ನಡುವೆ ಚಕ್ರ. ಇದು ನಮ್ಮ ತ್ರಿವರ್ಣ ಪತಾಕೆಯ, ಅಶೋಕ ಚಕ್ರಧ್ವಜದ ಮೊದಲನೆಯ ಸಂದೇಶ.*

ಗೀತೆ ನಮಗೆ ಬೋಧಿಸುತ್ತದೆ:

ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ
ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಮ್
ತಸ್ಮಾತ್ ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್
ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ
ಅಘಾಯುಃ ಇಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ

ಪ್ರಾಣಿಗಳು ಬದುಕುವುದಕ್ಕೆ ಬೇಕೇಬೇಕಾದ ಅನ್ನವನ್ನು ಬೆಳೆಯಲು ಏನು ಮಾಡಬೇಕೋ ಆ ಕರ್ಮಗಳಲ್ಲಿ ನಿರತರಾದ ಹೊರತು, ಆ ಕರ್ಮಗಳ ಪರಂಪರೆಯನ್ನು ಚಕ್ರದಂತೆ ಉರುಳಿಸಿಕೊಂಡು ಹೋದ ಹೊರತು, ಆ ಜನಗಳ ಬದುಕು ವ್ಯರ್ಥ—ಎಂಬುದು ಈ ಮಾತಿನ ಸಾರ. ಏಕೀಭಾವದಿಂದ, ಅದಕ್ಕೂ ಮೀರಿದ ಏಕೀಕರಣದಿಂದ ಮಾತ್ರ ಈ ಚಕ್ರವನ್ನು ನಡೆಸುವುದೂ ಅದರ ಹಿಂದೆ ನಡೆಯುವುದೂ ಸಾಧ್ಯ.

* ಧ್ವಜದ ಇತರ ಸಂದೇಶಗಳಿಗೆ ಈ ಪುಸ್ತಕ ನೋಡಿ: **ಸ್ವತಂತ್ರ ಭಾರತದ ಅಶೋಕ ಚಕ್ರಧ್ವಜ:** ಜಿ. ಪಿ. ರಾಜರತ್ನಂ, ಹಿಂದ್ ಕಿತಾಬ್ಸ್, ಬೊಂಬಾಯಿ ೧೯೪೮.

ಈ ಅನ್ನವನ್ನು ಉದ್ಭವಮಾಡುವ ಚಕ್ರವನ್ನು ಆಶ್ರಯಿಸುವುದು ಇದೇ ದೇಶವನ್ನು ಆರ್ಥಿಕವಾಗಿ ಉದ್ಧಾರಮಾಡುವ ಏಕೈಕ ರೀತಿ.

**ಎರಡನೆಯುದು—'ವಂದೇ ಮಾತರಂ'.** ಈ ಗೀತೆಯ ಮೊದಲ ನೆಯ ಚರಣ ಎಲ್ಲರಿಗೂ ಗೊತ್ತು. ಆದರೆ, ಕಾರಣಾಂತರಗಳಿಂದ, ಅರಿಯದವರ ಮನಸ್ಸಿಗೆ ನೋವಾಗಬಾರದೆಂದು, ನಾವು ಹಾಡದೆ ಬಿಟ್ಟಿರುವ ಮುಂದಿನ ಚರಣಗಳಲ್ಲಿಯೇ ಈ ಗೀತೆಯ ಜೀವಾಳವಿರುವುದು.

ತುಮಿ ವಿದ್ಯಾ, ತುಮಿ ಧರ್ಮ,
ತುಮಿ ಹೃದಿ, ತುಮಿ ಮರ್ಮ,
ತ್ವಂ ಹಿ ಪ್ರಾಣಾಃ ಶರೀರೇ
ಬಾಹುತೇ ತುಮಿ ಮಾ ಶಕ್ತಿ,
ಹೃದಯೇ ತುಮಿ ಮಾ ಭಕ್ತಿ,
ತೋಮಾರಈ ಪ್ರತಿಮಾ ಗಡಿ,
ಮಂದಿರೇ ಮಂದಿರೇ

'ವಿದ್ಯೆಯೂ ನೀನೇ, ಆ ವಿದ್ಯೆಯಿಂದ ಬರುವ ಧರ್ಮವೂ ನೀನೇ; ಹೃದಯವೂ ನೀನೇ, ಆ ಎದೆಯೊಳಗಿನ ರಹಸ್ಯವೂ ನೀನೇ; ಐದು ಜ್ಞಾನೇಂದ್ರಿಯಗಳ ಐದು ಕರ್ಮೇಂದ್ರಿಯಗಳ ಮೂಲಕವಾಗಿ ವ್ಯಕ್ತವಾಗುವ ಶರೀರದೊಳಗಿನ ಪ್ರಾಣಗಳೆಲ್ಲವೂ ನೀನೇ; ತಾಯೇ, ಬಲಶಾಲಿಯಾದವನ ತೋಳುಗಳಲ್ಲಿನ ಶಕ್ತಿಯೂ ನೀನೇ; ಕರುಣಾಮಯನಾದವನ ಹೃದಯದೊಳಗಿನ ಭಕ್ತಿಯೂ ನೀನೇ; ಇಂತಹ ನಿನ್ನ ಪ್ರತಿಮೆಯು ಪ್ರತಿಯೊಂದು ಮಂದಿರಮಂದಿರದಲ್ಲಿಯೂ ಇರಲಿ.'

ಇಲ್ಲಿ 'ಮಂದಿರ' ಎಂದರೆ ದೇವಾಲಯವೆಂಬ ಕಟ್ಟಡವಲ್ಲ, ಹೃದಯವೆಂಬ ಮಂದಿರ. ಅದರ ಹಾಗೆಯೇ 'ಪ್ರತಿಮೆ' ಎಂದರೆ 'ವಿಗ್ರಹ'ವಲ್ಲ, ಮನಸ್ಸಿನ ಭಾವನೆ.

ಮುಂದಿನ ಚರಣ ನೋಡಿ:

ತ್ವಂ ಹಿ ದುರ್ಗಾ ದಶಪ್ರಹರಣಧಾರಿಣೀ,
ಕಮಲಾ ಕಮಲದಲ ವಿಹಾರಿಣೀ,
ವಾಣೀ ವಿದ್ಯಾದಾಯಿನೀ,
ನಮಾಮಿ ತ್ವಾಂ

"ಯಾರನ್ನು ಕೆಲವರು ಹತ್ತು ಆಯುಧಗಳನ್ನು ಹಿಡಿದ ದುರ್ಗೆಯೆಂದು ಭಾವಿಸುವರೋ, ಮತ್ತೆ ಕೆಲವರು ಯಾರನ್ನು ಕಮಲದ ದಳಗಳಲ್ಲಿ ವಿಹರಿಸುವ ಲಕ್ಷ್ಮಿಯೆನ್ನುವರೊ, ಯಾರನ್ನು ಇನ್ನೂ ಕೆಲವರು ವಿದ್ಯೆಯನ್ನು ದಾನಮಾಡುವ ಸರಸ್ವತಿ ಎನ್ನುವರೊ—ಆ ಅವಳೇ ನೀನು. ನಿನಗೆ ನಮಸ್ಕಾರ."

'ವಂದೇ ಮಾತರಂ' ಗೀತೆಯಲ್ಲಿ ಕಾಣುವ ಈ ವರ್ಣನಾಭಾಗಗಳು ಯಾವ ಮೂರ್ತಿಪೂಜೆಗೆ ಸಂಬಂಧಪಟ್ಟಿದ್ದೂ ಅಲ್ಲ. ಗೀತೆಯಲ್ಲಿ ನಾವು ಕೇಳಿರುವ

ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ
ತತ್ತದೇವಾವಗಚ್ಛ ತ್ವಂ ಮಮ ತೇಜೋಂಶಸಂಭವಂ

ಎಂಬ ಭಗವದ್ವಾಣಿಯನ್ನು ಈ ಬಂಕಿಂ ಕವಿವಾಣಿ ಈ ಗೀತೆಯಲ್ಲಿ ವಿವರಿಸಲು ಯತ್ನಿಸುತ್ತದೆ. ಎಲ್ಲೆಲ್ಲಿ ಯಾವುಯಾವುದು ಸಮರ್ಥವಾಗಿ ವೃದ್ಧಿಯನ್ನು ಹೊಂದಿ ಕಂಗೊಳಿಸುವುದೋ ಆ ಅದು ಎಲ್ಲವೂ ಒಂದೇ ತೇಜಸ್ಸಿನ ಅನೇಕ ಅಂಶಗಳಿಂದ ಹುಟ್ಟಿದ್ದು ಎಂದು ತಿಳಿಯಬೇಕು. ಇದನ್ನೇ—

ಯ ಏಕಃ ಅವರ್ಣಃ ಬಹುಧಾ ಶಕ್ತಿಯೋಗಾತ್
ವರ್ಣಾನ್ ಅನೇಕಾನ್ ನಿಹಿತಾರ್ಥೋ ದಧಾತಿ

ಎಂದು ಉಪನಿಷತ್ತಿನ ಋಷಿವಾಣಿಯೂ ಹೇಳಿದ್ದು. ಇದನ್ನೇ ನಮ್ಮ ಮುಪ್ಪಿನ ಷಡಕ್ಷರಿ ಹೀಗೆ ಹಾಡಿದ್ದಾನೆ:

ಸಕಲಕೆಲ್ಲಕೆ ನೀನೆ ಅಕಳಂಕ ಗುರುವೆಂದು
ನಿಖಿಳಶಾಸ್ತ್ರವು ಪೇಳುತಿರಲರಿದೆನು

ಅವರವರ ದರುಶನಕೆ ಅವರವರ ವೇಷದಲಿ
ಅವರವರಿಗೆಲ್ಲ ಗುರು ನೀನೊಬ್ಬನೇ
ಅವರವರ ಭಾವಕ್ಕೆ ಅವರವರ ಅರ್ಚನೆಗೆ
ಅವರವರಿಗೇ ದೇವ ನೀನೊಬ್ಬನೇ

ಹೋರಾಟವಿಕ್ಕಿಸಲು ಬೇರಾದೆಯಲ್ಲದೆ
ಬೇರುಂಟೆ ಜಗದೊಳಗೆ ಎಲೆ ದೇವನೆ
ಆರು ಅರಿಯರು ನೀನು ಬೇರಾದ ಪರಿಗಳನು
ಮೂರಾರಿ ಶಿವ ಷಡಕ್ಷರಿ ಲಿಂಗವೆ

ಉಪನಿಷತ್ತಿನ ಋಷಿ 'ಸಹಿತಾರ್ಥಃ' ಎಂದುದನ್ನೇ ಕನ್ನಡದ ಕವಿ 'ಆರು ಅರಿಯರು ನೀನು ಬೇರಾದ ಪರಿಗಳನು' ಎಂದಿದ್ದಾನೆ. ಏಕನಾಗಿದ್ದವನು ಅನೇಕನಾದುದಕ್ಕೆ ಅರ್ಥವುಂಟು. ಆದರೆ ಅದು ರಹಸ್ಯವಾಗಿದೆ. ನಾವು ಅರಿಯೆವು, ಅಷ್ಟೆ.

ಹೀಗೆ, ಹೊರಗೆ ಕಾಣುವ 'ಅನೇಕ'ದ ಒಳಗಡೆ ನಿತ್ಯವಾಗಿ, ಸತ್ಯವಾಗಿ ಇರುವ ಆ 'ಏಕ'ವನ್ನು ಕಿವಿಯ ಮೂಲಕ ಹೃದಯದಲ್ಲಿ ಬಿತ್ತುವುದೇ ಈ 'ವಂದೇ ಮಾತರಂ' ಮಂತ್ರದ ಮುಖ್ಯ ಉದ್ದೇಶ.

**ಇನ್ನು ಮೂರನೆಯದು—'ಜನಗಣಮನ'.** ಈ ಗೀತೆಯ ಮಾತುಗಳು 'ವಂದೇ ಮಾತರಂ' ಗೀತೆಯದಕ್ಕಿಂತ ಹೆಚ್ಚು ಪ್ರಚಾರದಲ್ಲಿ ಇವೆ. ಆದರೆ ಈ ಗೀತೆಯಿಂದ ಎಷ್ಟು ಅರ್ಥವನ್ನು ಕಡೆಯಬಹುದೋ, ಪಡೆಯಬಹುದೋ, ಅಷ್ಟನ್ನು ನಾವು ಇನ್ನೂ ಕಡೆದಿಲ್ಲ, ಪಡೆದಿಲ್ಲ ಎಂದರೆ ತಪ್ಪಲ್ಲ.

ಈ ಗೀತೆಯಲ್ಲಿ 'ಭಾರತದ ಭಾಗ್ಯವನ್ನು ವಿಧಾಯಕ ಮಾಡುವ ಆ ಜನಗಣಗಳ ಮನಸ್ಸಿನ ಅಧಿನಾಯಕ'ನನ್ನು ಕುರಿತು ಐದು ಚರಣಗಳಿವೆ. ಮೊದಲನೆಯ ಚರಣದಲ್ಲಿ ಭಾರತಭಾಗ್ಯವಿಧಾತನನ್ನು **'ಜನಗಣ ಮಂಗಳದಾಯಕ'** ಎಂದಿದ್ದಾರೆ; 'ಅಹರಹ ತವ' ಎಂಬ ಎರಡನೆಯ ಚರಣದಲ್ಲಿ ಅದೇ ಭಾರತಭಾಗ್ಯವಿಧಾತನು **'ಜನಗಣ ಐಕ್ಯವಿಧಾಯಕ'**ನಾಗಿದ್ದಾನೆ; 'ಪತನ ಅಭ್ಯುದಯ' ಎಂಬ ಮೂರನೆಯ ಚರಣದಲ್ಲಿ **'ಜನಗಣ ಪಥಪರಿಚಾಯಕ'**ನಾಗಿದ್ದಾನೆ; 'ಘೋರ ತಿಮಿರ ಘನ' ಎಂಬ ನಾಲ್ಕನೆಯ ಚರಣದಲ್ಲಿ **'ಜನಗಣ ದುಃಖತ್ರಾಯಕ'** ನಾಗಿದ್ದಾನೆ; 'ರಾತ್ರಿ ಪ್ರಭಾತಿಲೊ' ಎಂಬ ಕಡೆಯ ಚರಣದಲ್ಲಿ **'ರಾಜೇಶ್ವರ'**ನಾಗಿದ್ದಾನೆ.

ನಮ್ಮ ಜನಗಣದ ಮನಸ್ಸಿನ ಅಧಿನಾಯಕನು ತಾನು 'ರಾಜೇಶ್ವರ'ನಾಗುವುದಕ್ಕೆ ಮೊದಲು ಮೆಟ್ಟಿಹೋಗಬೇಕಾದ ಹೆಜ್ಜೆಗಳಲ್ಲಿ ಎಷ್ಟನ್ನು ದಾಟಿದ್ದಾನೆ ಎಂಬುದನ್ನು ವಿಚಾರ ಮಾಡಿದವರಿಗೆ 'ಹೋಗಬೇಕಾದ ದಾರಿ ಇನ್ನೂ ಅಪಾರವಾಗಿ ಇದೆ' ಎಂಬುದು ಗೋಚರವಾಗದಿರದು.

ಭಾರತಭಾಗ್ಯವಿಧಾತನು ಇದೇ ಈಗ ತಾನೆ, ಒಂದು ವರುಷದ ಹಿಂದೆ, **ಮಂಗಳದಾಯಕ**ನಾಗಿ ಆದನು. ಜನರಲ್ಲಿ ಇರುವ ಅನೈಕ್ಯತೆ ಮಾಯವಾಗಿ ಅವರು ಒಂದಾದಾಗ ಆತನು **ಐಕ್ಯವಿಧಾಯಕ** ಎನಿಸುತ್ತಾನೆ. ಅನಂತರವೇ ಮುಂದಿನ ಮಾತು—ಆತನು **ಪಥ ಪರಿಚಾಯಕ**ನಾಗಿ ದೇಶಕ್ಕೆ ದಾರಿ ತೋರಿಸುವುದು; ಆತನು **ದುಃಖತ್ರಾಯಕ**ನಾಗಿ ಜನಗಳು ಸುಖ ಕಾಣುವುದು; ದುಃಖದ ಕತ್ತಲೆ ಕಳೆದು, ಸುಖದ ಸೂರ್ಯ ಹುಟ್ಟಿ, ಆತನು **ರಾಜೇಶ್ವರ**ನಾಗಿ ಬೆಳಗುವುದು.

ಆದ್ದರಿಂದ ಈ 'ಜನಗಣಮನ'ವು ಬ್ರಿಟಿಷರು ಭಾರತವನ್ನು ಬಿಟ್ಟುಹೋದ ಮಂಗಳವಾರ್ತೆಯನ್ನು ಪ್ರಸ್ತಾಪಿಸಿ, ಸದ್ಯದಲ್ಲಿ ಸಾಧಿಸಬೇಕಾದ ಐಕ್ಯತೆಯನ್ನು ಜ್ಞಾಪಿಸಿ, ಮುಂದಿನ ಕಾರ್ಯವನ್ನು ಕುರಿತು ನಮಗೆ ಎಚ್ಚರಿಕೆ ಕೊಡುತ್ತದೆ.

ಹೀಗೆ ಈ ಮೂರೂ—ಎಂದರೆ ಒಂದು ರಾಷ್ಟ್ರಧ್ವಜವೂ ಎರಡು ರಾಷ್ಟ್ರಗೀತೆಗಳೂ—ನಮ್ಮ ಐಕ್ಯತೆಯ ಸಾಧನೆಗೆ ಅರ್ಚಾಮೂರ್ತಿಗಳಾಗಿವೆ.

೩

ಐಕ್ಯತೆಯ ಅಗತ್ಯವನ್ನು ಎಲ್ಲರೂ ಒಪ್ಪಿದ್ದೇವೆ, ಎಲ್ಲರೂ ಆಡುತ್ತೇವೆ. ಆದರೆ ಈ ಐಕ್ಯತೆಯನ್ನು ಸಾಧಿಸುವ ದಾರಿ ಯಾವುದು?

ನಮ್ಮ ರಾಷ್ಟ್ರಧ್ವಜವು ನಮಗೆ ಏಕತೆಯನ್ನು ಉಪದೇಶಿಸುವ ಹಾಗೆಯೇ ಆ ಧ್ವಜದ ನಡುವಿನ ಚಕ್ರವನ್ನು ಯಾವ ರಾಜನ ಹೆಸರಿನಿಂದ ವಿಶೇಷಿಸುವೆವೋ ಆ ಅಶೋಕನೇ ಈ ಏಕತೆಗೆ ದಾರಿಯನ್ನೂ ತೋರಿದ್ದಾನೆ. ಆದರೆ ಈ ದಾರಿ 'ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ' ಎಂದ ಹಾಗೆ, ಕತ್ತಿಯ ಅಲಗಿನಂತೆ ಹರಿತವಾದುದು, ದಾಟಲು ಕಠಿನ. ಇಂಥದನ್ನು ಕುರಿತೇ ನಮ್ಮ ಅಣ್ಣ ಆ ಅರ್ಜುನ ಹೇಳಿದ್ದು:

ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಂ
ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್

ಮನಸ್ಸು ಚಂಚಲವಾದದ್ದು, ಬೇಗ ಕದಡಿಹೋಗುತ್ತದೆ, ಸುಲಭವಾಗಿ ಬಗ್ಗುವುದಿಲ್ಲ. ಗಾಳಿಯನ್ನು ಹಿಡಿದಿಡುವುದು ಹೇಗೋ ಹಾಗೆಯೇ ಮನಸ್ಸನ್ನು ಹಿಡಿದಿಡುವುದೂ ತುಂಬ ಕಷ್ಟ.

ಮಾತು ಎಂಬುದು ಮನಸ್ಸಿಗೆ ಮೊದಲನೆಯ ಮುಖ; ಮಾತನ್ನು ನಿಗ್ರಹ ಮಾಡಿದರೆ, ಜನರಲ್ಲಿ ಸಮರಸವುಂಟಾಗುವುದಕ್ಕೆ ಬುಡ ಭದ್ರ ಮಾಡಿದ ಹಾಗೆ ಆಗುತ್ತದೆ—ಎಂದು ಅಶೋಕನು ಆ ದಿವಸವೇ ಹೇಳಿದ್ದಾನೆ. ಇದನ್ನು '**ವಚನಗುಪ್ತಿ**' ಎಂದು ಹೆಸರಿಸಿ, ಈ ವಚನಗುಪ್ತಿಯಿಂದ '**ಸಮವಾಯ**' ಬೆಳೆಯುತ್ತದೆ, ಈ '**ಸಮವಾಯ**'ದಿಂದ ಪ್ರಜೆಗಳ '**ಸಾರವೃದ್ಧಿ**'ಯಾಗುತ್ತದೆ ಎಂದು ತನ್ನ ಹನ್ನೆರಡನೆಯ ಶಿಲಾ ಶಾಸನದಲ್ಲಿ* ಕೆತ್ತಿಸಿ ಹೋಗಿದ್ದಾನೆ. ಈ ಆರ್ಷೇಯಮಾರ್ಗದ ಆರಾಧನೆಯೇ ನಮ್ಮ ಶ್ರೇಯಸ್ಸಿಗೆ ಮೂಲ.

ಚೀನಾ ದೇಶದಲ್ಲಿ ಮೂರು ಕೋತಿಗಳ ಒಂದು ವಿಗ್ರಹಪಂಕ್ತಿ ಬಹಳ ಪ್ರಸಿದ್ಧವಾದುದಂತೆ. ಅದರಲ್ಲಿ ಒಂದು ಕೋತಿ ಎರಡೂ ಕೈಗಳಿಂದ ತನ್ನ ಎರಡು ಕಿವಿಗಳನ್ನೂ, ಇನ್ನೊಂದು ತನ್ನ ಎರಡು ಕೈಗಳಿಂದ ತನ್ನ ಎರಡು ಕಣ್ಣುಗಳನ್ನೂ, ಕಡೆಯದು ತನ್ನೆರಡು ಕೈಗಳಿಂದ ತನ್ನೆರಡು ತುಟಿಗಳನ್ನೂ ಒತ್ತಿ ಮುಚ್ಚಿರುತ್ತದಂತೆ. 'ಕೆಟ್ಟದ್ದನ್ನು ಕೇಳಬೇಡ, ಕೆಟ್ಟದ್ದನ್ನು ನೋಡಬೇಡ, ಕೆಟ್ಟದ್ದನ್ನು ನುಡಿಯಬೇಡ' ಎಂದು ಈ ವಾನರಪಂಕ್ತಿಗೆ ಅರ್ಥವಂತೆ.

ಆದರೆ ಕೆಟ್ಟದ್ದನ್ನು ಕಾಣದಿರುವುದೂ, ಕೆಟ್ಟದ್ದನ್ನು ಕೇಳದಿರುವುದೂ ಸಂಪೂರ್ಣವಾಗಿ ನಮ್ಮ ವಶವಲ್ಲದಕಾರಣ, ಅವು ಎರಡೂ ನಮ್ಮ ಮೇಲೆ ಮುತ್ತಿಬೀಳುವ ಕಾರಣ, ಕೆಲವು ಸಲ ಕೆಟ್ಟದ್ದನ್ನು ಕೇಳಬೇಕಾಗುತ್ತದೆ, ಕೆಲವು ಸಲ ಕೆಟ್ಟದ್ದನ್ನು ಕಾಣಬೇಕಾಗುತ್ತದೆ. ಆದರೆ ಕೆಟ್ಟದ್ದನ್ನು ಆಡದಿರುವುದು ಮಾತ್ರ ಸಂಪೂರ್ಣವಾಗಿ ನಮ್ಮ ವಶವೇ ಆದುದರಿಂದ, ಉಳಿದ ಎರಡು ನಿಗ್ರಹಗಳಿಗಿಂತ ಈ ನಿಗ್ರಹದಲ್ಲಿ ನಮ್ಮ 'ಸ್ವತಂತ್ರತೆ' ಹೆಚ್ಚು. ಆದುದರಿಂದಲೇ ಅಶೋಕನು ಈ ನಿಗ್ರಹದ ಉತ್ಕೃಷ್ಟತೆಯನ್ನು ಅಷ್ಟು ಎತ್ತಿ ಹಾಡಿದನು. ಈ 'ವಚನಗುಪ್ತಿ'ಯ ಮಹತ್ತ್ವವನ್ನು ಅರಿತುಕೊಂಡು ಅದರಂತೆ ಮನಸ್ಸನ್ನು ಬೆಳೆಸಿದರೆ, ಆಗ ಅನೇಕ ದೇಶಗಳ, ಅನೇಕ ಭಾಷೆಗಳ, ಅನೇಕ ಮತಗಳ, ಅನೇಕ

* ಇದೇ ಪುಸ್ತಕ: 'ಸಮವಾಯೊ ಏವ ಸಾಧು.' ಪುಟ ೨೪-೨೭.

ವರ್ಣಗಳ ಅನೇಕರು ತಮ್ಮ ಸಾರಭೂತವಾದ ಏಕತೆಯನ್ನು ಕಂಡು ಪಡೆದು ಬದುಕಬಹುದು.

ಆದರೆ ಲೋಕದಲ್ಲಿ ಯಾವ ಕ್ಷೇತ್ರದಲ್ಲಿ ತೆಗೆದುಕೊಂಡರೂ ಏಕತೆಯನ್ನು ಸಾಧಿಸುವುದು ಎಂಬುದು ಹಳೆಯ ಬಟ್ಟೆಗೆ ತೇಪೆ ಹಾಕಿದ ಹಾಗೆ. ಬಿಳಿಯ—ಕರಿಯ, ಪೂರ್ವದವ—ಪಶ್ಚಿಮದವ, ದುಡ್ಡು ಉಳ್ಳವ—ಅದು ಇಲ್ಲದವ, ಗುಣವಂತ—ಗುಣಹೀನ, ಆ ಮತ—ಈ ಮತ, ಆ ಮಾತು—ಈ ಮಾತು, ಆ ಕುಲ—ಈ ಕುಲ ಮೊದಲಾದ ಎಣಿಕೆಯಿಲ್ಲದಷ್ಟು ಭಿನ್ನತೆಗಳಿರುವಾಗ, ಏಕತೆ ಎಂಬುದರ ಕಲ್ಪನೆಯೂ ಸಾಹಸವೆನ್ನಿಸಬಹುದು. ಹಳೆಯ ಬಟ್ಟೆಯನ್ನು ಇಲ್ಲಿ ಹೊಲಿದರೆ, ಅದು ಅಲ್ಲಿ ಹಿಸಿಯುತ್ತದೆ; ಅಲ್ಲಿ ತೇಪೆ ಹಾಕಿದರೆ, ಇನ್ನೊಂದು ಕಡೆ ತೂತು ಬೀಳುತ್ತದೆ. ಅದರ ಹಾಗೆಯೇ ಈ ಬಹುಮುಖವಾದ ಅನೈಕ್ಯದಲ್ಲಿ ಒಂದು ಕಡೆ ಕೂಡಿಸಿದರೆ, ಇನ್ನೊಂದು ಕಡೆ ಎಲ್ಲಿಯೋ ಕೂಡಿದ್ದುದು ಬಿಚ್ಚಿಕೊಳ್ಳುತ್ತದೆ. ಇದು ಈ ಲೋಕದ ಸ್ವಭಾವ. ಇಂತಹ ಸ್ವಭಾವದ ಲೋಕದಲ್ಲಿ ಆದಷ್ಟು ಐಕ್ಯತೆಯನ್ನು ಸಾಧಿಸಲು ಧೈರ್ಯಮಾಡುವುದು ಈ ಲೋಕವನ್ನು ತಿಳಿದ ಜೀವದ ಸ್ವಭಾವ.

ಲೋಕದಲ್ಲಿ, ಜೀವರಾಶಿ ಜನಿಸುವುದು ಕೋಳಿಯು ಮೊಟ್ಟೆಗಳನ್ನು ಪಡೆದ ಹಾಗೆ. ಅದು ಹಾಕಿದ ನೂರಾರು ಮೊಟ್ಟೆಗಳಲ್ಲಿ ಕೆಲವು ಒಡೆದುಹೋಗುತ್ತವೆ, ಕೆಲವು ಕೊಳೆತುಹೋಗುತ್ತವೆ, ಕೆಲವನ್ನು ಜನ ಹಾಗೆಹಾಗೆಯೇ ಹಸಿಹಸಿಯಾಗಿ ತಿಂದುಬಿಡುತ್ತಾರೆ; ಎಲ್ಲಿಯೋ ಒಂದೋ ಎರಡೋ ಮೊಟ್ಟೆ ಮಾತ್ರ, ತನ್ನ ಹೊರಗಿನ ಸಿಪ್ಪೆಯನ್ನು ಸೀಳಲು ಬೇಕಾದ ಕಾವನ್ನು ಪಡೆದುಕೊಂಡು, ರೆಕ್ಕೆ ಬಲಿಯದ ಹಕ್ಕಿಯಾಗಿ ಹೊರಗೆ ಬರುತ್ತದೆ. ಕೋಳಿಯ ಮೊಟ್ಟೆಯಿಂದ ಹೊರಗೆ ಬಂದರೆ, ಆ ಹಕ್ಕಿ ನೆಲದ ಮೇಲಿನ ಹಕ್ಕಿಯಾಗಿ ಓಡಾಡುತ್ತದೆ. ಗಗನಚಾರಿ ಪಕ್ಷಿಗಳ ಮೊಟ್ಟೆಯಿಂದ ಬಂದುದಾದರೆ, ಈ ಎರಡನೆಯ ಜನ್ಮ ಬಂದಮೇಲೆ ತಾನೂ ಗಗನಚಾರಿಯಾಗುತ್ತದೆ. ಹೀಗೆ ಎರಡನೆಯ ಜನ್ಮ ಪಡೆದುದಕ್ಕೆ 'ದ್ವಿಜ' ಎಂಬ ಹೆಸರು ಸಲ್ಲುತ್ತದೆ.

ಅದರ ಹಾಗೆಯೇ ಮನುಷ್ಯರಲ್ಲಿ ಆದರೂ. ತಾಯಿಯ ಗರ್ಭದಿಂದ ಬಂದವರೆಲ್ಲ ನರಗಣವೇ. ಅಲ್ಲಿ ಒಳಗಿದ್ದ ಭಾರ ಇಲ್ಲಿ ಹೊರಗೆ ಬಂತು, ಅಷ್ಟೆ. ಆದರೆ ಈ ನರಗಣದಲ್ಲಿ ತಮ್ಮ ಪ್ರಜ್ಞೆಯಿಂದಲೂ ಶೀಲದಿಂದಲೂ ಆತ್ಮವನ್ನು ಬೆಳಸಿಕೊಂಡವರು ಮಾತ್ರ ಭೂಮಿಗೆ ಸಾರ್ಥಕವಾಗುವಂತಹ ಎರಡನೆಯ ಜನ್ಮವನ್ನು ಪಡೆದವರು. ಇವರಿಗೆ ಮಾತ್ರ '**ದ್ವಿಜ**' ಎಂಬ ಹೆಸರು ಒಪ್ಪುವುದು.

ಹಾಗೆಂದರೆ, ಏನು ಹೇಳಿದ ಹಾಗಾಯಿತು? ದೇಶದಲ್ಲಿ ಏಕತೆಯನ್ನು ಸಾಧಿಸುವುದೆಂದರೆ: ಪ್ರಜ್ಞಾವಂತರೂ ಶೀಲವಂತರೂ ತಮ್ಮ ಪ್ರಜ್ಞೆಯನ್ನೂ ಶೀಲವನ್ನೂ ಉಳಿಸಿಕೊಂಡು ಬೆಳಸಬೇಕು, ಪ್ರಜ್ಞೆ ಸಾಲದವರೂ ಶೀಲ ಸಾಲದವರೂ ತಮ್ಮದನ್ನು ಹೆಚ್ಚಿಸಿಕೊಳ್ಳಬೇಕು; ಎಂದರೆ ಇಬ್ಬರೂ ತಮ್ಮ ಬೆಳವಣಿಗೆಯಲ್ಲಿ ಸದಾ ನಿರತರಾಗಿ ಇರಬೇಕು—ಎಂದು ಹೇಳಿದ ಹಾಗಾಯಿತು.

ಇದು ಸಾಧ್ಯವಾಗಬೇಕಾದರೆ ಉತ್ತಮರಾಗಿರುವವರಿಗೆ ಇನ್ನೂ ಉತ್ತಮರಾಗದವರ ಮೇಲೆ ಪ್ರೀತಿಯಿರಬೇಕು, ಅನುಕಂಪವಿರಬೇಕು. ಅವರನ್ನೂ ತಮ್ಮ ಜೊತೆಗೆ ಒಯ್ಯುವ ಸಹನೆಯಿರಬೇಕು. ಅದರಂತೆಯೇ, ಇನ್ನೂ ಉತ್ತಮರಾಗದವರಿಗಾದರೂ ತಮಗಿಂತ ಅಧಿಕರಾದವರನ್ನು ಕಂಡು ಅಸೂಯೆಯಾಗದಿರಬೇಕು, ಅವರಂತೆ ಆಗಬೇಕೆಂಬ ಆಸಕ್ತಿ ಬರಬೇಕು, ಅದಕ್ಕೆ ಬೇಕಾದ ಆಚಾರ ಬಲಿಯಬೇಕು. ಹೀಗೆ ಎರಡೂ ಕಡೆಗಳಿಂದ ಅವರವರ ಪರಸ್ಪರವಾದ ಧರ್ಮ ಜೊತೆಜೊತೆಯಲ್ಲೇ ಬೆಳೆದರೆ ಮಾತ್ರ, ಏಕತೆ ಎಂಬುದು ಸಾಧ್ಯ.

ಇದನ್ನು ಕುರಿತೇ ಗೀತೆಯಲ್ಲಿ ಈ ಮಾತು ಹೇಳಿರುವುದು:

ಪುರೋವಾಚ ಪ್ರಜಾಪತಿಃ . . ಏಷವೋऽಸ್ತ್ವಿಷ್ಟಕಾಮಧುಕ್
ಪರಸ್ಪರಂ ಭಾವಯನ್ತಃ ಶ್ರೇಯಃ ಪರಂ ಅವಾಪ್ಸ್ಯಥ

ಪ್ರಜೆಗಳನ್ನು ಸೃಷ್ಟಿಸಿದಾಗಲೇ, ಹಿಂದೆಯೇ, ಸೃಷ್ಟಿಕರ್ತನು ಅವರಿಗೆ ಹೇಳಿದನಂತೆ: ಇದೇ ನಿಮಗೆ ಇಷ್ಟಾರ್ಥಗಳನ್ನು ಕೊಡುವ ಹಸುವಾಗಲಿ. ಯಾವುದು? ಒಬ್ಬರನ್ನು ಒಬ್ಬರು ಚೆನ್ನಾಗಿ ಭಾವಿಸಿದರೆ, ಅತ್ಯುತ್ತಮವಾದ ಶ್ರೇಯಸ್ಸನ್ನು ಪಡೆಯುವಿರಿ—ಎಂಬ ಮಾತು.

ಸ್ವಾರ್ಥದಲ್ಲಿ ಸಂಕೋಚಗೊಳ್ಳುವುದು ಕೆಲವರಿಗೆ ಪ್ರಿಯ. ಆದರೆ ಈ ಪ್ರೀತಿಯಿಂದ ಬರುವ ಸುಖ ತಾತ್ಕಾಲಿಕವಾದದ್ದು. ಸ್ವಾರ್ಥವನ್ನು ಪರಾರ್ಥಕ್ಕಾಗಿಯೂ ವಿಶಾಲಗೊಳಿಸುವುದು ಕೆಲವರಿಗೆ ಪ್ರಿಯ. ಆದರೆ ಈ ಪ್ರೀತಿಯಿಂದ ಬರುವ ಸುಖ ಸರ್ವಕಾಲಿಕವಾದದ್ದು. ಇಂತಹ ಸರ್ವಕಾಲಿಕವಾದ ಸುಖವನ್ನು ತರುವ ಗುಣವುಳ್ಳದ್ದನ್ನು 'ಶ್ರೇಯಸ್ಸು' ಎಂದು ಕರೆಯುತ್ತಾರೆ. ಮೇಲೆ ಹೇಳಿದ ಗೀತೆಯ ಬೋಧೆ ಇಂತಹ ಸರ್ವಕಾಲಿಕವಾದ ಸುಖವನ್ನು ತರುವಂಥದು.

೪

'ಕಾಲ ಬಹಳ ಕೆಟ್ಟುಹೋಯಿತು' ಎಂಬುದು ತೀರ ಪರಿಚಿತವಾದ ಅನುಭವದ ಮಾತಾಗಿಹೋಗಿದೆ. ಕೃತಯುಗದಲ್ಲಿ ಧರ್ಮ ನಾಲ್ಕು ಕಾಲು ಊರಿ ನಿಂತಿತ್ತಂತೆ; ತ್ರೇತೆಯಲ್ಲಿ ಅದಕ್ಕೆ ಮುಕ್ಕಾಲು ಆಯಿತಂತೆ; ದ್ವಾಪರದಲ್ಲಿ ಇನ್ನೊಂದು ಕಾಲು ಹೋಯಿತಂತೆ; ಈಗ ಕಲಿಯಲ್ಲಿ ಧರ್ಮಕ್ಕೆ ಒಂದೇ ಕಾಲಂತೆ. ಅಂತೆ! ಇರಬಹುದು. ಆದರೆ ಒಂದಾದರೂ ಕಾಲು ಇದೆಯಲ್ಲ—ಅಷ್ಟೇ ಸಮಾಧಾನ. ಆ ಕಾಲೂ ಹೋದರೆ—'ಪದ ಕುಸಿಯೆ ನೆಲವಿಹುದು' ಎಂಬುದೇ ಧೈರ್ಯ. ಕೆಳಗೆ ಈ ಧರಣಿ ಇರುವವರೆಗೂ ಧರ್ಮಕ್ಕೆ ಚ್ಯುತಿಯಿಲ್ಲ, ಧೈರ್ಯಕ್ಕೂ ಚ್ಯುತಿಯಿಲ್ಲ.

ಕೃತಯುಗದಲ್ಲಿಯೇ ಅಲ್ಲವೇ ಪರಶುರಾಮನು ಇಪ್ಪತ್ತೊಂದು ಸಲ ಕ್ಷತ್ರಿಯರನ್ನು ಸಂಹಾರಮಾಡಿದ್ದು? ರಾಮರಾಜ್ಯದ ಯುಗದಲ್ಲಿಯೇ ಅಲ್ಲವೆ ವಾಲಿಸುಗ್ರೀವರ ಜಗಳ? ರಾವಣನ ಸೀತಾಪಹರಣ? ನಿರಪರಾಧಿನಿಯಾದ ಸೀತೆಯ ಪರಿತ್ಯಾಗ? ದ್ವಾಪರದಲ್ಲಂತೂ ದ್ರೌಪದಿಯ ಪಾಡೆ! ಪಾಂಡವರ ಪಾಡೆ! ಸಾಕ್ಷಾತ್ ಕೃಷ್ಣನಿಗೆ ಬಂದ ಕೊನೆಯೆ! ಒಂದೆ! ಎರಡೆ! ಈಗಿನ ಕಲಿಯಲ್ಲಿ ಅಂತೂ....ಅಂಗೈಯ ಹುಣ್ಣಿಗೆ ಕನ್ನಡಿ ಏಕೆ? ಯಾವ ಕಾಲದಲ್ಲಿಯೂ ಯಾರ ಕಾಲದಲ್ಲಿಯೂ ಇದೇ ಕತೆಯೆ. ಸ್ವಲ್ಪ ಹೆಚ್ಚು, ಸ್ವಲ್ಪ ಕಡಿಮೆ.

ರಾಮ ಕಾರ್ಮುಕ, ಕೃಷ್ಣ ಯುಕ್ತಿ, ಗೌತಮ ಕರುಣೆ
ಭೂಮಿಭಾರವನಿಳುಹೆ ಸಾಲದಾಗಿರಲು

ಸಾಮಾನ್ಯರೆನಿತು ತಾಂ ಪೆಣಗಿದೊಡಮೇನಪುದು?
ಕ್ಷೇಮವೆಂದುಂ ಮೃಗ್ಯ -- ಮಂಕುತಿಮ್ಮ*

ದುಷ್ಟರನ್ನು ದಮನಮಾಡುವುದಕ್ಕೂ, ಶಿಷ್ಟರನ್ನು ಕಾಪಾಡುವುದಕ್ಕೂ ರಾಮನು ಬಿಲ್ಲನ್ನು ಹಿಡಿದನು; ಕೃಷ್ಣನು ಆಯುಧವನ್ನು ಹಿಡಿಯದೆಯೇ ಅನೇಕವಾದ ಉಪಾಯಗಳನ್ನು ಆಶ್ರಯಿಸಿದನು; ಬುದ್ಧನಂತೂ ಹಿಂಸೆಯ ಸೋಂಕೇ ಇಲ್ಲದ ವಿಶ್ವಪ್ರೈತ್ರಿಯನ್ನು ಪ್ರಯೋಗಿಸಿದನು. ಆದರೂ ಭೂಮಿಯ ದುಃಖದ ಭಾರ ಮರೆಯಾಗಲಿಲ್ಲ. ಅಂಥಂಥವರ ಪ್ರಯತ್ನಗಳೇ ಸಾಲದೆ ಬಂದಾಗ ಸಾಮಾನ್ಯರ ಪ್ರಯತ್ನಗಳಿಗೆ ಏನು ಫಲ ದೊರಕೀತು? ಕ್ಷೇಮ ಎಂಬುದು ಎಂದಿನಿಂದಲೂ ಕೈಗೆ ಸಿಕ್ಕದೆ ನುಣಿಚಿಕೊಳ್ಳುತ್ತಿದೆ.

ಇದನ್ನೇ ದಿವಂಗತ 'ಶ್ರೀ' ಅವರ **'ಶುಕ್ರಗೀತೆ'**† ಎಂಬ ಅನೋಘವಾದ ಕವನ ಕಣ್ಣಿಗೆ ಕಟ್ಟಿದಂತೆ ವರ್ಣಿಸುತ್ತದೆ.

ಅಂದು ಮೊದಲಾದುದೇ ದೇವಾಸುರಂ
ಎಂದು ಕೊನೆಕಾಣ್ಬುದೋ ದೇವಾಸುರಂ

ಎಂಬುದಾಗಿ, ಬೆಳಕಿಗೂ ಕತ್ತಲೆಗೂ, ದೇವತೆ ಎಂಬ ಪುಣ್ಯಶಕ್ತಿಗೂ ಅಸುರ ಎಂಬ ಪಾಪಶಕ್ತಿಗೂ ಅನಾದಿ ಕಾಲದಿಂದ ನಡೆಯುತ್ತಿರುವ ನಿಲ್ಲದ ಕಾಳಗವನ್ನು ಅಲ್ಲಿ ಚಿತ್ರಿಸಿದ್ದಾರೆ.

ಮಾನವನ ಹೃದಯದಾಳದ ಕಡಲನ್
ಒಂದು ಕಡೆ ನಿರ್ಜರರ್ ದೇವರ್
ಒಂದು ಕಡೆ ಕಾಮಚರರ್ ಅಸುರರ್
ಛಲದೆ ಬಿಡದಿರ್ವರುಂ ಬಗಿಬಗಿದು ಮಥಿಸುವರ್, ಪೊಸೆವರ್,
ಅತ್ತಲಿತ್ತಲ್ ಪೊರಳೆ ಅಲೆ ಕಲಕಿ ನೊರೆ ತೂರಿ ಕಾಲಂ

"ಆದರೂ ಶಮದಮಗಳಿಂದ, ಯಜ್ಞಬುದ್ಧಿಯಿಂದ, ಶುದ್ಧಿಯಿಂದ, ಧಾತುಪ್ರಸಾದದಿಂದ, ಪ್ರೇಮದಿಂದ ಆಳುವಾತನ ಕರುಣೆಯಿಂದ, ಇರುಳು

* **ಮಂಕುತಿಮ್ಮನ ಕಗ್ಗ:** ಡಿ. ವಿ. ಜಿ. ೧೯೪೩.

† **ಗಾಂಧೀ ಜ್ಞಾಪಕ ದೀಪ:** ಸತ್ಯಶೋಧನ ಪ್ರಕಟನ ಮಂದಿರ, ೧೯೪೮. ಪುಟ ೧೩—೧೮.

ಹೋಗಿ ಹೊಳಪಾಗಿ, ಕಣ್ಗೆಟ್ಟ ಕಣ್ಣು ತಿಳಿವಾಗಿ ಕಣ್ತೆರೆಯಲು, ವಿಷದಿಂದ ಅಮೃತವನ್ನು ಕಡೆದು, ರೌದ್ರರೂಪಗಳಿಂದ ರಮ್ಯತೆಯನ್ನು ಪಡೆದು, ವಕ್ರವನ್ನು ಋಜುಗೊಳಿಸಿ, ಒಲ್ಲದುದನ್ನು ಒಲುಮೆಯಿಂದ ಒಲಿಸಿ, ಹಲ್ಲುಮುರಿದ ಹಾವು ಆಭರಣವಾಗುವಂತೆ ದೈತ್ಯರು ಕೈವಶವಾಗಲು, ಪುಣ್ಯಪುರವನ್ನು ಕಟ್ಟಿ, ಪುರುಷನ ಒಳಅಗ್ನಿಯನ್ನು ಕಾಪಾಡುವವರೇ ದೇವರು. ಅವರೇ ಯುಗಯುಗದಲ್ಲೂ ಧರ್ಮಾಮೃತವನ್ನು ಕರೆಯುವ ಗುರುಗಳು."

ಇದೇ ನಿತ್ಯಕಾಳಗವನ್ನೇ ಶ್ರೀ ಮಂಜೇಶ್ವರದ ಗೋವಿಂದ ಪೈ ಅವರು ತಮ್ಮ **'ಯಾರೆಂಬರು ಮುಗಿದುದೆಂದು ಬವರಂ?'*** ಎಂಬ ಓಜಸ್ವೀಕವನದಲ್ಲಿ ಹಾಡಿದ್ದಾರೆ.

ಯಾರೆಂಬರು ಮುಗಿದುದೆಂದು ಬವರಂ ?
ನಂಬದಿರದು ಮರುಳರ ಮಾತೆ ;
ನರನೆನ್ನೆವರಂ ನರನನ್ನೆವರಂ
ರಣಾಂಗಣವೆ ಶಾಂತಿಯ ಮಾತೆ
ಶಾಂತಿಯೆ ನಿನ್ನಯ ಸಾಧನವಾಗೆ
ಸದಾ ಸಿದ್ಧವಿರು ಯುದ್ಧಕೆ ಸಾಗೆ.

ಎಂದು ಈ ಕವನ ಮೊದಲಾಗುತ್ತದೆ. ಇಲ್ಲಿ 'ಬವರ' ಎಂದರೆ, ಯುದ್ಧ. ಮನುಷ್ಯ ಎಲ್ಲಿಯವರೆಗೆ ಮನುಷ್ಯನಾಗಿರುತ್ತಾನೆಯೋ ಅಲ್ಲಿಯವರೆಗೂ ಯುದ್ಧ ತಪ್ಪಿದ್ದಲ್ಲ. ಈ ಯುದ್ಧದಲ್ಲಿ ಯಾವ ಪಕ್ಷ ಶಾಂತಿಯನ್ನು ಆಯುಧವನ್ನಾಗಿ ಹಿಡಿಯುವುದೋ ಆ ಪಕ್ಷಕ್ಕೆ ಜಯ. 'ಶುಕ್ರಗೀತೆ' ಯಲ್ಲಿ ಎಂದಂತೆ—'ಋತವೊಂದೆ ಗೆಲ್ಲುವುದು, ಅನೃತವಲ್ಲ.'

ಮೇಲೆ ಒಂದು ಕಡೆ 'ದ್ವಿಜ'ನಾದ ನರನನ್ನು ಕುರಿತು ಪ್ರಸ್ತಾಪಿಸಿದೆವಲ್ಲ, ಈ ಕವನದಲ್ಲಿಯೂ ಅದನ್ನು ಕುರಿತು ಒಂದು ಚರಣವಿದೆ.

ಸಾಲದು ನರಜನ್ಮವ ಬರಿದೆತ್ತೆ
ಜನ್ಮಮಾತ್ರವೇತರ ಕಾರ್ಯಂ ?

*** ಉದ್ಘೋಷ :** ಬಾಳಿಗಾ ಅಂಡ್ ಸನ್ಸ್, **ಮಂಗಳೂರು, ೧೯೪೭. ಪುಟ ೩೩—೩೭.**

ನರನಹೆಯೊ? ದುಡಿ ನರತೆಯು ಮತ್ತೆ—
ದ್ವಿಜನಾಗದ ಮನುಜನನಾರ್ಯಂ!
ಪರರಳಲಿನ ಪರಿಹರಿಕೆಗೆ ಸಂದು
ಹೊಸ ಬಾಳೆತ್ತಿದವನೆ ದ್ವಿಜನಿಂದು.

ಹೀಗೆ ದ್ವಿಜನಾದವನು ಮಾಡುವ ಈ ಆರ್ಯಕರ್ಮ ಕೊನೆಯವರೆಗೂ ನಿಲ್ಲದೆ ಮತ್ತೆಮತ್ತೆ ನಡೆಯಬೇಕು. ಮಂಕುತಿಮ್ಮನು ಹೇಳಿದ ಹಾಗೆ 'ಹೋರಾಡು ಬೀಳ್ವನ್ನಂ ಒಬ್ಬೊಂಟಿಯಾದೊಡಂ.' ಇದನ್ನೇ ಗೋವಿಂದ ಪೈಗಳು ಹೀಗೆನ್ನುತ್ತಾರೆ:

ನೆರವಿಗೆ ಯಾರೆಂದೇತಕೆ ಖಿನ್ನ?
ಕಾದಿಸುವೊಡೆಯನೆ ಜತೆಗಿಲ್ಲಾ?
ಎಂದಿನಿಂಪ ಕಾದಪನಿದೊ! ನಿನ್ನ
ನುಳಿದು ತಾನೆ ಕಾದುವನಲ್ಲ!
ಕಂಡಿಸೆದೆಯನಿಡು ಗಂಡಡಿ ಮುಂಪೆ
ನೂಕು ರವೀಂದು ಪತಾಕೆಯ ಹಿಂದೆ.

ಇದನ್ನೇ ಕೃಷ್ಣ ಅರ್ಜುನನಿಗೆ ಹೀಗೆ ಹೇಳಿದ್ದು:

ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೆ ಮಹೀಂ
ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ

ಸತ್ತುಬಿದ್ದರೆ ಸ್ವರ್ಗ; ಗೆದ್ದರೆ ಭೂಮಿಯ ಅನುಭೋಗ. ಆದ್ದರಿಂದ, ಯುದ್ಧವನ್ನು ನಿಶ್ಚಯಮಾಡಿ ಎದ್ದೇಳಬೇಕು.

ಮೇಲಿನ ಪದ್ಯದಲ್ಲಿ 'ಬವರಂ **ಮುಗಿದುದು**' ಎಂದಿಲ್ಲ; '**ಮುಗಿ ದುವು**' ಎಂದಿದ್ದಾರೆ. ಎಂದರೆ, ಶಾಂತಿ ಬೇಕೆಂದು ಬಯಸುವವನು ಎದುರಿಸಬೇಕಾದುದು ಒಂದು ಯುದ್ಧವನ್ನಲ್ಲ, ಅನೇಕ ಯುದ್ಧಗಳನ್ನು; ಗೆಲ್ಲಬೇಕಾದುದು ಬರಿಯ ಹೊರಗಿನದನ್ನು ಮಾತ್ರವಲ್ಲ, ಒಳಗಿನವನ್ನು ಕೂಡ. ಆದ್ದರಿಂದಲೇ 'ಸದಾ ಸಿದ್ಧವಿರು ಯುದ್ಧಕೆ ಸಾಗೆ' ಎಂದದ್ದು.

೫

ಹಾಗಾದರೆ, ಈ ಕಾಳೆಗ ಸದಾ ಇರುವುದಾದರೆ, ಗತಿ ಹೇಗೆ? ಕೊನೆ ಎಲ್ಲಿ? ಉತ್ತರ ಇಷ್ಟೆ: ಈ ಕಾಳೆಗಕ್ಕೆ ಗತಿ ಗೊತ್ತು, ಕೊನೆ ಮಾತ್ರ

ಇಲ್ಲ. ಈ ಸ್ವತಂತ್ರದ ಸಂಬಂಧವಾದ ಯುದ್ಧದಲ್ಲಿ ತಾನು ಒಲಿಯುವ ಪಕ್ಷದ ಯುಕ್ತಾಯುಕ್ತತೆಯನ್ನು ವಿವೇಕದಿಂದ ಕಂಡು ಸೇರತಕ್ಕದ್ದು. ತಾನು ಒಲಿದ ಪಕ್ಷಕ್ಕೆ ತನ್ನ ಸೇವೆಯನ್ನು ನಿರ್ವಂಚನೆಯಿಂದ ಸಲ್ಲಿಸ ತಕ್ಕದ್ದು. ಇತರರು ಮಾಡುವುದನ್ನು ಅಥವಾ ಮಾಡದುದನ್ನು ಗಮನಿ ಸುವುದಕ್ಕಿಂತ ತಾನು ಮಾಡಿದುದನ್ನು ಅಥವಾ ಮಾಡದುದನ್ನು ಗಮನಿ ಸತಕ್ಕದ್ದು. ಇದು ಪ್ರತಿಯೊಬ್ಬನೂ ತನ್ನ ಪಾಲಿನದಾಗಿ ದೇಶದ ಸುಖಕ್ಕೆ ಕೂಡಿಸಬಹುದಾದ ಅಂಶ.

ನ ಪರೇಸಂ ವಿಲೋಮಾನಿ ನ ಪರೇಸಂ ಕತಾಕತಂ
ಅತ್ತನೋವ ಅವೆಕ್ಖೆಯ್ಯ ಕತಾನಿ ಅಕತಾನಿ ಚ

"ಇನ್ನೊಬ್ಬರ ದೋಷಗಳನ್ನಲ್ಲ, ಇನ್ನೊಬ್ಬರು ಮಾಡಿದುದನ್ನಲ್ಲ, ಮಾಡ ದುದನ್ನಲ್ಲ; ತಾನು ಮಾಡಿದುದನ್ನೂ ಮಾಡದುದನ್ನೂ ಅವಲೋಕಿಸಲಿ" ಎಂದು ಬುದ್ಧನು ಹೇಳಿದ ಮಾತು ನಮ್ಮ ಗೀತೆ ಹೇಳಿದ "ಉದ್ಧರೇತ್ ಆತ್ಮನಾ ಆತ್ಮಾನಂ" ಎಂಬುದರ ಇನ್ನೊಂದು ರೂಪ.

ಆದ್ದರಿಂದಲೇ ನಮ್ಮವರು "ತನ್ನ ತಾನರಿತರೆ ಗುರು" ಎಂದರು. ತನ್ನ ತಾನರಿತರೆ ತಾನು ಗುರುವಾಗುವುದು ಮಾತ್ರವಲ್ಲ, ತನ್ನ ದೇಶದ ಗುರುತ್ವವೂ ತನ್ನೊಡನೆಯೇ ಹೆಚ್ಚುತ್ತದೆ.

ಇಂಥದೇ ಮಾತನ್ನು, ಬುದ್ಧನ ಸಮಕಾಲೀನನಾದ ಕಾಂಫ್ಯೂಷ ಎಂಬ ಚೀನಾದ ಮಹಾಪುರುಷನು ಹೀಗೆ ಹೇಳಿದ್ದಾನೆ:*

"ಲೋಕದ ಜನರ ನಡತೆಯನ್ನು ಉತ್ತಮಗೊಳಿಸಬೇಕೆಂದು ಇಷ್ಟಪಟ್ಟ ಪ್ರಾಚೀನರು ಮೊದಲು ತಮ್ಮ ರಾಷ್ಟ್ರಜೀವನವನ್ನು ಕ್ರಮ ಗೊಳಿಸುತ್ತಿದ್ದರು. ತಮ್ಮ ರಾಷ್ಟ್ರಜೀವನವನ್ನು ಕ್ರಮಗೊಳಿಸಬೇಕೆಂದು ಇಷ್ಟಪಟ್ಟವರು ಮೊದಲು ತಮ್ಮ ಕುಟುಂಬಜೀವನವನ್ನು ಕ್ರಮಗೊಳಿಸು ತ್ತಿದ್ದರು. ತಮ್ಮ ಕುಟುಂಬಜೀವನವನ್ನು ಕ್ರಮಗೊಳಿಸಬೇಕೆಂದು ಇಷ್ಟಪಟ್ಟವರು ಮೊದಲು ತಮ್ಮ ವೈಯಕ್ತಿಕ ಜೀವನವನ್ನು ಬೆಳೆಯಿಸಿ ಕೊಳ್ಳುತ್ತಿದ್ದರು. ತಮ್ಮ ವೈಯಕ್ತಿಕ ಜೀವನವನ್ನು ಬೆಳೆಯಿಸಿಕೊಳ್ಳ ಬೇಕೆಂದು ಇಷ್ಟಪಟ್ಟವರು ಮೊದಲು ತಮ್ಮ ಹೃದಯಗಳನ್ನು

* ಚೀನಾದೇಶದ ಗಾಂಧಿ: ಸತ್ಯಶೋಧನ ಪ್ರಕಟನ ಮಂದಿರ, ೧೯೪೫, ಪುಟ ೬೩.

ನೇರ್ಪಡಿಸಲು ತೊಡಗುತ್ತಿದ್ದರು. ತಮ್ಮ ಹೃದಯಗಳನ್ನು ನೇರ್ಪಡಿಸ ಬೇಕೆಂದು ಇಷ್ಟಪಟ್ಟವರು ಮೊದಲು ತಮ್ಮ ಮನಸ್ಸಿನ ಸಂಕಲ್ಪಗಳನ್ನು ಶುದ್ಧವಾಗಿ ಇರಿಸಿಕೊಳ್ಳಲು ತೊಡಗುತ್ತಿದ್ದರು. ತಮ್ಮ ಮನಸ್ಸಿನ ಸಂಕಲ್ಪಗಳನ್ನು ಶುದ್ಧವಾಗಿ ಇರಿಸಿಕೊಳ್ಳಲು ಇಷ್ಟಪಟ್ಟವರು ಮೊದಲು ನಿಜವಾದ ಜ್ಞಾನವನ್ನು ಸಂಪಾದಿಸಲು ತೊಡಗುತ್ತಿದ್ದರು.

"ನಿಜವಾದ ಜ್ಞಾನವನ್ನು ಸಂಪಾದಿಸುವುದು ವಸ್ತುಗಳ ಅನ್ವೇಷಣೆಯನ್ನು ಅವಲಂಬಿಸಿಕೊಂಡಿದೆ. ವಸ್ತುಗಳನ್ನು ಅನ್ವೇಷಣೆ ಮಾಡಿದ ಮೇಲೆ ನಿಜವಾದ ಜ್ಞಾನ ಸಿದ್ಧಿಸುತ್ತದೆ. ನಿಜವಾದ ಜ್ಞಾನ ಸಿದ್ಧಿಯಾದರೆ ಸಂಕಲ್ಪ ಶುದ್ಧವಾಗುತ್ತದೆ. ಸಂಕಲ್ಪ ಶುದ್ಧವಾದಾಗ ಹೃದಯವು ನೇರ್ಪಡುತ್ತದೆ. ಹೃದಯ ನೇರ್ಪಟ್ಟಾಗ ವೈಯಕ್ತಿಕ ಜೀವನ ಬೆಳೆಯುತ್ತದೆ. ವೈಯಕ್ತಿಕ ಜೀವನ ಬೆಳೆದಾಗ ಕುಟುಂಬಜೀವನ ವ್ಯವಸ್ಥೆಗೊಳ್ಳುತ್ತದೆ. ಕುಟುಂಬಜೀವನ ವ್ಯವಸ್ಥೆಗೊಂಡಾಗ ರಾಷ್ಟ್ರ ಜೀವನ ಕ್ರಮಗೊಳ್ಳುತ್ತದೆ. ರಾಷ್ಟ್ರಜೀವನ ಕ್ರಮಗೊಂಡಾಗಲೇ ಲೋಕದಲ್ಲಿ ಶಾಂತಿ ನೆಲಸುತ್ತದೆ.

"ಚಕ್ರವರ್ತಿಯಿಂದ ತೊಡಗಿ ಸಾಮಾನ್ಯನ ವರೆಗೂ, ಪ್ರತಿಯೊಬ್ಬನೂ, ವೈಯಕ್ತಿಕ ಜೀವನದ ವ್ಯವಸಾಯವನ್ನೇ ಬುಡವೆಂದೂ ತಳಾದಿಯೆಂದೂ ತಿಳಿಯಬೇಕು. ಬುಡವಾಗಲಿ ತಳಾದಿಯಾಗಲಿ ಅವ್ಯವಸ್ಥಿತವಾಗಿದ್ದರೆ, ವ್ಯವಸ್ಥಿತವಾದ ಮರವಾಗಲಿ ಕಟ್ಟಡವಾಗಲಿ ಅದರಿಂದ ಹುಟ್ಟದುದಿಲ್ಲ. ಬುಡ ಸಣ್ಣದಾಗಿ ಬಳುಕುತ್ತಿದ್ದರೂ ಭಾರವಾದ ದಟ್ಟವಾದ ಕೊಂಬೆಗಳನ್ನು ಹೊತ್ತುಕೊಂಡ ಮರ ಈವರೆಗೆ ಹುಟ್ಟಿಲ್ಲ.

"ಇದಕ್ಕೆ 'ವಸ್ತುಗಳ ಬುಡವನ್ನೂ ತಳಾದಿಯನ್ನೂ ತಿಳಿಯುವಿಕೆ' ಎಂದು ಹೆಸರು."

ಇಂತಹ ಜ್ಞಾನವನ್ನು ಪಡೆದು ನಾವು ಅಧಿಕರಾಗುವ ಹಾಗೆ 'ಸ ನೋ ಬುದ್ಧ್ಯಾ ಶುಭಯಾ ಸಂಯುನಕ್ತು'—ಆ ದೈವವು ನಮಗೆ ಸದ್ಬುದ್ಧಿಯನ್ನು ಅನುಗ್ರಹಿಸಲಿ. ಈ ಕೋರಿಕೆಗೆ ಈ ಆಪ್ತವಾಕ್ಯ ಪರಂಪರೆ ಪ್ರೇರಕವಾಗಲಿ.

# ಜನತಾರಾಜ್ಯದ ಭಾರ

## ಪ್ರಜೆಯಿಂ ರಾಜ್ಯಂ! ಅವರ್ ವಿಸತ್ತ್ವರ್ ಇರೆ— ರಾಜ ಅಮಾತ್ಯ ಕೋಶಂಗಳ್ ಏನ್?

ಶ್ರೀರಾಮಚಂದ್ರನು ತುಂಬುಗರ್ಭಿಣಿಯಾದ ಸೀತಾದೇವಿಯನ್ನು ಕಾಡಿಗೆ ಕಳುಹಿಸಿದ ಕತೆ ಎಲ್ಲರಿಗೂ ತಿಳಿದೇ ಇದೆ. ಅಯೋಧ್ಯೆಯಲ್ಲಿ ಯಾವನೋ ಒಬ್ಬನು, (ಅವನು ಯಾರೆಂಬುದು ಕೂಡ ತಿಳಿಯದು) ತನ್ನ ಮಾತಿನ ಪರಿಣಾಮ ಏನಾಗುತ್ತದೆ ಎಂಬುದನ್ನು ಯೋಚಿಸದೆ, ಸೀತಾದೇವಿಯ ನಡತೆಯನ್ನು ಕುರಿತು ಒಂದು ಕೆಟ್ಟ ಮಾತನಾಡಿದ ನಂತೆ. ಆ ಮಾತನ್ನು ಕೇಳಿದವರು, ತಮ್ಮ ನಾಲಗೆಯ ತೀಟೆಯನ್ನು ತಡೆಯಲಾರದೆ ತಾವು ಅದನ್ನು ಕಿವಿಯಿಂದ ಕಿವಿಗೆ ಹಬ್ಬಿಸಿದರು. ಮೊದಲನೆಯವನು ಆಡಿದ ಕೆಟ್ಟ ಮಾತು, ನೀರಿನ ಮೇಲೆ ಒಂದು ಹನಿ ಎಣ್ಣೆ ಹಾಕಿದರೆ ಅದು ಹೇಗೆ ಎಲ್ಲ ಕಡೆಗೂ ತೆಳ್ಳಗೆ ಹರಡಿಕೊಳ್ಳು ವುದೋ ಹಾಗೆ, ಅಯೋಧ್ಯೆಯಲ್ಲೆಲ್ಲ ಗುಜುಗುಜು ಆಗಿಹೋಯಿತು.

ಆ ಸುಳ್ಳುಸುದ್ದಿಯನ್ನು, ಆ ಕೆಟ್ಟಸುದ್ದಿಯನ್ನು, ಆಡಿದವರಾಗಲಿ ಹಬ್ಬಿಸಿದವರಾಗಲಿ ಯಾರೂ ಸೀತೆಗೆ ಕೇಡುಮಾಡಬೇಕೆಂದು ಬುದ್ಧಿ ಪೂರ್ವಕವಾಗಿ ಹಾಗೆ ನಡೆದವರಲ್ಲ. ಆದರೂ ವಿಚಾರವಿಲ್ಲದೆ ಆದ ಆ ಕೆಲಸದಿಂದ ಸೀತೆ ವನವಾಸವನ್ನು ಅನುಭವಿಸಬೇಕಾಯಿತು. ಕಡೆಗೆ ಲವಕುಶರನ್ನು ಹೆತ್ತಮೇಲೆ, ಅಪವಾದವನ್ನು ಅನುಭವಿಸಿ ಭೂಮಿಯಲ್ಲಿ ಬದುಕಿರುವುದಕ್ಕಿಂತ ಮರಣವೇ ಲೇಸೆಂದು ಭೂಗರ್ಭದಲ್ಲಿ ಅಡಗಿ ಹೋಗಬೇಕಾಯಿತು.

ಇದಿಷ್ಟು ನಾವು ರಾಮಾಯಣದಲ್ಲಿ ಕೇಳಿರುವ ಕಥೆ.

ಈ ಕಥೆಯ ಮುಂದಿನ ಭಾಗವನ್ನು ಶ್ರೀ ಡಿ. ವಿ. ಜಿ. ಅವರು ಹೀಗೆ ಕಲ್ಪಿಸಿದ್ದಾರೆ.* ಈ ಕಲ್ಪನೆ ನಮ್ಮ ಬುದ್ಧಿಗೆ ಹೊಸ ಬೆಳಕು ಕೊಡು ತ್ತದೆ, ಪುರಾಣಕಥೆಯ ಅರಕೆಯನ್ನು ಪೂರೈಸುತ್ತದೆ.

*'ಶ್ರೀರಾಮಪರೀಕ್ಷಣಂ'—ಡಿ.ವಿ.ಜಿ. ಕರ್ಣಾಟಕ ಪ್ರಕಟನಾಲಯ, ೧೯೪೫.

"ಕೆಟ್ಟ ಮೇಲೆ ಬುದ್ಧಿ ಬಂತು, ಅಟ್ಟ ಮೇಲೆ ಒಲೆ ಉರಿಯಿತು" ಎಂದು ಒಂದು ಕನ್ನಡಗಾದೆ. ಅಯೋಧ್ಯೆಯ ಜನರಿಗಾದರೂ ಸೀತೆಯು ರಸಾತಲವನ್ನು ಪ್ರವೇಶಿಸಿದಳೆಂಬ ವಾರ್ತೆಯನ್ನು ಕೇಳಿದ ಮೇಲೆ ಬುದ್ಧಿ ಬಂತು. ತಾವು ಎಂತಹ ವಸ್ತುವನ್ನು ಕಳೆದುಕೊಂಡೆವು ಎಂಬುದರ ತಿಳಿವಳಿಕೆ ಆಯಿತು. ಯಾವನೋ ಬುದ್ಧಿವಂತ "ನಮ್ಮಿಂದಲೇ ಈ ಅನ್ಯಾಯ ನಡೆಯಿತು. ನಾವು ಈ ಚಾಡಿಯನ್ನು ಹೇಳದಿದ್ದರೆ ಸೀತೆಗೆ ಈ ಗತಿ ಬರುತ್ತಿರಲಿಲ್ಲ. ಬುದ್ಧಿಯಿಲ್ಲದವರು ನಾವು ಬಾಯಿಗೆ ಬಂದ ಹಾಗೆ ಕೂಗಾಡಿದರೆ, ರಾಜನಾದ ಶ್ರೀರಾಮನಾದರೂ ನಮ್ಮ ಮಾತನ್ನು ದೊಡ್ಡದಾಗಿ ಗಣಿಸದೆ, ಸೀತೆಯನ್ನು ದಂಡಿಸದೆ ಇರಬಹುದಾಗಿತ್ತಲ್ಲ!" ಎಂದು ಸಂಕಟದಿಂದ ಗೋಳಾಡಿದರು. ಮೊದಲು ಸೀತೆಯನ್ನು ಅಕಾರಣ ವಾಗಿ ನಿಂದಿಸಿದವನ ಮಾತನ್ನು ಎತ್ತಿಕೊಂಡು ಎಲ್ಲರೂ ತಮ್ಮ ನಾಲಗೆಯ ಮೇಲೆ ಓಡಿಯಾಡಿಸಿದ ಹಾಗೆಯೇ, ಈಗಲಾದರೂ ಸಕಾರಣವಾಗಿಯೇ ಸೀತೆಗಾಗಿ ಮರುಕವನ್ನು ತೋರಿಸಿ, ತಮ್ಮನ್ನೇ ನಿಂದಿಸಿಕೊಂಡವರ ಮಾತನ್ನೂ ಪುನಃ ಏನೂ ಪಕ್ಷಪಾತವಿಲ್ಲದೆ, ಅಯೋಧ್ಯೆಯ ಜನ ತಾವೂ ಆಡಿದರು.

ಜನತೆ ಎಂಬುದು ಒಂದು ಕುರಿಮಂದೆ--ಯಾವ ಕಾಲದಲ್ಲೂ, ಯಾವ ದೇಶದಲ್ಲೂ. ಮೊದಲು ಯಾರು ಎತ್ತ ತುಯ್ದರೆ, ಕಣ್ಣುಮುಚ್ಚಿ ತಾನೂ ಅತ್ತಲೇ ನುಗ್ಗುವುದು. ನುಗ್ಗುವುದು ಮೊದಲು, ನೋಡುವುದು ಆಮೇಲೆ; ಯೋಚಿಸುವುದು ಎಲ್ಲವೂ ಮುಗಿದ ಮೇಲೆ. ಅಯೋಧ್ಯೆಯ ಜನತೆ ಈ ನಿಸರ್ಗಸಂಪ್ರದಾಯಕ್ಕೆ ತಾವು ಪುರಾಣಪುರುಷರಾದರು.

ಅಯೋಧ್ಯೆಯ ಜನರ ಮನಸ್ಸಿಗೆ ಬಂದ ಶಂಕೆಯೇ ಈ ಸೀತಾ ಪರಿತ್ಯಾಗದ ಕಥೆಯನ್ನು ಕೇಳಿದವರೆಲ್ಲರ ಮನಸ್ಸಿಗೂ ಬಂದಿದೆ.

'ನಿರಪರಾಧಿನಿಯಾದ ಸೀತೆಯನ್ನು ರಾಮನು ಏಕೆ ಕಾಡಿಗೆ ಅಟ್ಟಿ ದನು?' ಎಂಬುದಕ್ಕೆ ಮೊದಲು ಸಮಂಜಸವಾದ ಉತ್ತರ ಹೇಳಿದವನು ಭವಭೂತಿ ಎಂಬ ದೊಡ್ಡಕವಿ. **'ಲೋಕದ ಆರಾಧನೆ'** ಗಾಗಿ ರಾಮನು ಸೀತೆಯನ್ನು ಕೈಬಿಟ್ಟನಂತೆ. ಇಲ್ಲಿ 'ಆರಾಧನೆ' ಎಂಬುದಕ್ಕೆ 'ಲೋಕ ವನ್ನು ತೃಪ್ತಿಪಡಿಸುವುದಕ್ಕೋಸ್ಕರ' ಎಂದು ಯಾರೋ ಅರಿಯದವರು

ಅರ್ಥಮಾಡಿಬಿಟ್ಟು, ಪುನಃ ಜನತೆ ಆದನ್ನೇ ನಂಬಿದೆ. ಎಂದರೆ, ಈ ಹೊತ್ತಿನ ದಿವಸ 'Cheap popularity' ಎನ್ನುತ್ತೇವೆಯಲ್ಲಾ ಅದನ್ನು ಸಂಪಾದಿಸುವುದಕ್ಕಾಗಿ, ಪ್ರಜೆಗಳನ್ನು ತೃಪ್ತಿಪಡಿಸಬೇಕೆಂದು, ರಾಮನು ಸೀತೆಯನ್ನು ತೊರೆದನೆಂದು ಭಾವಿಸಿಕೊಂಡು, ರಾಮನಲ್ಲಿ ಕಳಂಕವನ್ನು ಆರೋಪಿಸುತ್ತಾರೆ. ಈ ಪ್ರಕರಣವನ್ನು ಶ್ರೀ. ಡಿ. ವಿ. ಜಿ. ಚಿತ್ರಿಸಿರುವ ರೀತಿ ಯುಕ್ತಿಯುಕ್ತವಾಗಿ ಮನಸ್ಸಿಗೆ ಒಪ್ಪಿಗೆಯಾಗುತ್ತದೆ.

ಅಯೋಧ್ಯೆಯ ಜನ ರಾಮನ ಹತ್ತಿರ ಹೋದರಂತೆ. "ದೊರೆಯೆ, ಅವಿವೇಕಿಗಳಾದ ನಮ್ಮ ಮಾತಿನಿಂದ ಈ ಅನರ್ಥವಾಯಿತು. ರಾಜನಾದ ನೀನಾದರೂ ನಮಗೆ ಆಗಲೇ ಬುದ್ಧಿ ಹೇಳಬಾರದಾಗಿತ್ತೆ?" ಎಂದರಂತೆ. ಆಗ ರಾಮನು ಅವರನ್ನು ಸಮಾಧಾನಗೊಳಿಸುತ್ತ, "ಈಗ ನಿಮಗೆ ಜ್ಞಾನೋದಯವಾಗಿದೆ. ಅರಿಯದೆ ಆಡುವ ಮಾತಿನಿಂದ ಎಂತೆಂತಹ ಅನರ್ಥಗಳು ಆಗುವುವೆಂಬುದನ್ನು ಅನುಭವಿಸಿದ್ದೀರಿ. ಸೀತಾಪರಿತ್ಯಾಗದಿಂದ ಈ ಶಿಕ್ಷಣ ನಿಮಗೆ ದೊರೆತಿದೆ. ಪ್ರಜೆಗಳಿಗೆ ಇಂತಹ ಶಿಕ್ಷಣವನ್ನು ಒದಗಿಸಿ, ಅವರ ಆತ್ಮವು ದಯೆಯಿಂದ ತುಂಬಿ ಬೆಳೆಯುವಂತೆ ನಡೆಸುವುದೇ ರಾಜನ ಕರ್ತವ್ಯ. ಪ್ರಜೆಗಳಿಂದಲೇ ರಾಜ್ಯ.

ಪ್ರಜೆಯಿಂ ರಾಜ್ಯಮವರ್ ವಿಸತ್ತ್ವರಿರೆ ರಾಜಾಮಾತ್ಯಕೋಶಂಗಳೇಂ
ಸೃಜಿಸಿರ್ಪರ್ ಜನತಾತ್ಮಸಂಸ್ಕರಣಕೆಂದಾರ್ಶೀಯರೀ ಸಂಸ್ಥೆಯಂ
ಋಜುಶೀಲಂ ಸಮಭಾಗಿಭಾವಮಮಲಜ್ಞಾನಾಸ್ಥೆ ಲೋಕಾದರಂ
ನಿಜಧರ್ಮೋದ್ಯಮಮೀ ಗುಣಂಗಳಿನವರ್ಗ್ಗಿಚ್ಛಾ ಶ್ರಯಮುಂ ಶ್ರೇಯಮುಂ

ಪ್ರಜೆಗಳು ಸತ್ತ್ವವಿಲ್ಲದವರಾಗಿದ್ದರೆ ಎಂತಹ ರಾಜನಿದ್ದು ಏನು ಪ್ರಯೋಜನ? ಎಂತಹ ಮಂತ್ರಿಗಳು ಇದ್ದು ಏನು ಪ್ರಯೋಜನ? ಭಂಡಾರ ಎಷ್ಟು ತುಂಬಿ ಇದ್ದರೆ ಏನು ಪ್ರಯೋಜನ? ಪ್ರಜೆಗಳಲ್ಲಿ ಸತ್ತ್ವವನ್ನು ಬೆಳೆಸುವುದಕ್ಕಾಗಿಯೇ ರಾಜನೂ ಅಮಾತ್ಯರೂ ಕೋಶವೂ ಮೀಸಲಾಗಿರಬೇಕು. ಇದೇ ಲೋಕದ **ಆರಾಧನೆ**. ಇದಕ್ಕಾಗಿಯೇ ನಾನು, ನಿಮ್ಮ ಬೆಳೆವಣಿಗೆಗಾಗಿಯೇ ಜಾನಕಿಯನ್ನು ಕಳುಹಿಕಳೆದೆನು.

ಜನಸೃಷ್ಟಿಶುನ್ನದ ಹಸಿತಂ ವನವಹ್ನಿವೊಲಾಗಿ ಹರಡಿ ನಿರ್ದೋಷಿಗಳಂ
ಗಣಿಸದೆ ದಹಿಪುದು ಸಕಲರನ್ ಅನುಕಂಪೆಯನುಳಿದ ವಚನಮುರಗೀರದನಂ

ಜನರು ಚಾಡಿಹೇಳುವಾಗ ನಗುನಗುತ್ತಾ ಹೇಳುತ್ತಾರೆ. ಅದು ಕಾಡು ಕಿಚ್ಚಿನಂತೆ ಹಬ್ಬಿ, ಇವರು ದೋಷಿಗಳು ಇವರು ನಿರ್ದೋಷಿಗಳು ಎಂದು ನೋಡದೆ ಎಲ್ಲರನ್ನೂ ಮುಟ್ಟಿ ಸುಡುತ್ತದೆ. ದಯೆಯಿಲ್ಲದೆ ಆಡಿದ ಮಾತು, ಹಾವಿನ ಹಲ್ಲಿನ ಹಾಗೆ, ಅನೇಕರಿಗೆ ವ್ಯಥೆಯನ್ನು ಉಂಟುಮಾಡುತ್ತದೆ. ನಾಲಗೆಯ ಮೇಲೆ ಹಿಡಿತವಿಲ್ಲದುದರಿಂದ ಏನಾಯಿತೋ ಕಂಡಿದ್ದೀರಿ, ಅದರ ಫಲ ಉಂಡಿದ್ದೀರಿ. ಬೆಳೆವಣಿಗೆಗೆ ಮೊದಲನೆಯ ಪಾಠವಾದ ಈ ನಾಲಗೆಯ ಮೇಲಿನ ಹಿಡಿತವನ್ನು ಕಂಡು ಕಲಿತಿದ್ದೀರಿ. ಆದ್ದರಿಂದ ರಾಜನಾದ ನನಗೆ ರಾಣಿಯಾಗಿ, ನನ್ನ ರಾಜಧರ್ಮದಲ್ಲಿ ಸಹಚರಿಯಾಗಿದ್ದ ಆ ಸೀತೆಯ ರಸಾತಲಪ್ರವೇಶವು ವ್ಯರ್ಥವಾಗಿಲ್ಲ. ಆದರಿಂದ ಪ್ರಜೆಗಳಾದ ನಿಮಗೆ ಸಾರ್ಥಕವಾಗಿದೆ" ಎಂದು ರಾಮನು ತನ್ನ ಕಾರ್ಯಕ್ಕೆ ಕಾರಣವನ್ನು ಕಾಣಿಸಿದನಂತೆ.

ಈ ಕಥೆಯಲ್ಲಿ ರಾಮನು ಜನತೆಯ **'ಆತ್ಮಸಂಸ್ಕರಣ'** ಎಂದು ಕರೆದುದನ್ನೇ ಶ್ರೀರಾಮನ ತಮ್ಮನಾದ ಭರತನಿಗೆ ಸರಿಹೋಲುವ ರಾಜಾ ಅಶೋಕನು ತನ್ನ ಶಾಸನಗಳಲ್ಲಿ **"ಸಾರವೃದ್ಧಿ"** ಎಂದು ಕರೆದಿದ್ದಾನೆ. ಈ 'ಸಾರವೃದ್ಧಿ' ಆಗುವುದಕ್ಕೆ **"ವಚನಗುಪ್ತಿ"**ಯೇ ಮೂಲ* ಎಂದೂ ಹೇಳಿದ್ದಾನೆ. "ವಚನಗುಪ್ತಿ" ಎಂದರೆ ಮಾತನ್ನು ಅಡಗಿಸಿಡುವುದು; ಎಂದರೆ, ಎಲ್ಲಿ ಮಾತನಾಡಬೇಕೋ ಅಲ್ಲಿ ಮಾತ್ರ, ಎಷ್ಟು ಮಾತನಾಡಬೇಕೋ ಅಷ್ಟು ಮಾತ್ರ, ಹೇಗೆ ಮಾತನಾಡಬೇಕೋ ಹಾಗೆ ಮಾತ್ರ, ಮಿತವಾಗಿ, ಹಿತವಾಗಿ, ಒಬ್ಬರಿಗೆ ನೋವಾಗದಂತೆ, ಆಡುವ ಮಾತಿನ ಪರಿಣಾಮವನ್ನು ತಿಳಿದು, ಮಾತನ್ನು ಮುತ್ತಿನಂತೆ ಬಳಸಬೇಕು. ಅಶೋಕನು ಈ ಶ್ರೇಯಸ್ಸಿನ ಮಾರ್ಗವನ್ನು ಹೇಳಿದನೆಂಬುದು ಕಥೆಯಲ್ಲ; ಈಹೊತ್ತಿಗೂ ಕಲ್ಲುಬಂಡೆಗಳ ಮೇಲೆ ಆ ಅಕ್ಷರ ಇದೆ. ಈ ಮಾರ್ಗವನ್ನು ಹಿಡಿದು ಅಶೋಕನ ಪ್ರಜೆಗಳು ಉದ್ಧಾರವಾದರೆಂಬುದಕ್ಕೆ ಚರಿತ್ರೆಯಲ್ಲಿ ಸಾಕ್ಷಿಗಳೂ ಹೇರಳವಾಗಿ ಇವೆ.

ಹಿಂದಿನ ಕಾಲದಲ್ಲಿ ರಾಮನಂತಹ ರಾಜರಿದ್ದರು, ಅಶೋಕನಂತಹ ರಾಜರಿದ್ದರು; ಪ್ರಜೆಗಳನ್ನು ಬೆಳೆಸುತ್ತಿದ್ದರು. ಆದರೆ ಕಾಲ

* ಇದೇ ಪುಸ್ತಕ: 'ಸಮವಾಯೊ ಏವ ಸಾಧು.' ಪುಟ ೨೪ ನೋಡಿ.

ಈಗ ಬದಲಾಗಿದೆ. ಅಂತಹ ರಾಜರೂ ಇಲ್ಲ. ಇರುವ ರಾಜರನ್ನೂ ಜನ ಒಲ್ಲೆವೆನ್ನುತ್ತಿದ್ದಾರೆ. ಹಾಗಾದರೆ ನಮ್ಮನ್ನು ಸರಿಯಾಗಿ ನಡೆಸುವ ಹೊಣೆ ಯಾರದು?

ಗೀತೆಯ ಆ ಮಹಾವಾಕ್ಯವೇ ನಮಗೆ ಗತಿ. **"ಉದ್ಧರೇತ್ ಆತ್ಮನಾ ಆತ್ಮಾನಂ".** ನಮ್ಮನಮ್ಮ ಕೊರತೆಗಳನ್ನೂ ಲೋಪದೋಷಗಳನ್ನೂ ನಾವುನಾವೇ ತಿಳಿದುಕೊಂಡು ನಾವುನಾವೇ ನಮ್ಮನ್ನು ತಿದ್ದಿಕೊಳ್ಳಬೇಕು. ಪ್ರತಿಯೊಬ್ಬನೂ ಇದನ್ನು ನಿರ್ವಂಚನೆಯಿಂದ ನಡೆಸಿದರೆ ಮಾತ್ರ ಜನತೆಯ ಸಾರವೃದ್ಧಿ ಸಾಧ್ಯ. ಈ ಸಾರವೃದ್ಧಿಗೆ ಮೂಲ, ಅಶೋಕನು ಹೇಳಿದಂತೆ, ವಚನಗುಪ್ತಿ. "ಮಾತು ಬಲ್ಲವನಿಗೆ ಜಗಳವಿಲ್ಲ" ಎಂದು ಒಂದು ಕನ್ನಡ ಗಾದೆ. ಆದರೆ ಅದು ಅಷ್ಟು ಸುಲಭವಲ್ಲ. ಇದೇ ಜನತಾರಾಜ್ಯದ ಬಲು ದೊಡ್ಡ ಭಾರ.

ಈ ಭಾರವನ್ನು ಹಗುರ ಮಾಡಿಕೊಡುವ "ವಚನಗುಪ್ತಿ"ಯೆಂಬ ತಾರಕ ಮಂತ್ರವನ್ನು ನಮಗೆ ಸದಾ ನೆನಪು ಮಾಡಿಕೊಡುವುದಕ್ಕೋಸ್ಕರ ಹಿರಿಯರು ನಮ್ಮ ರಾಷ್ಟ್ರಧ್ವಜದ ನಡುವೆ ಅಶೋಕನ ಚಕ್ರವನ್ನು ಇರಿಸಿಕೊಟ್ಟಿದ್ದಾರೆ.

ಈ ಚಕ್ರ ಈ ಜನತಾರಾಜ್ಯವನ್ನು ವಚನಗುಪ್ತಿಯ ಮೂಲಕ ಅಶೋಕದ ಕಡೆಗೆ ನಡೆಸಲಿ.

# ದೇಶಭಾಷೆಗಳ ದಿವ್ಯಧ್ವನಿ

## "ತಾಯ ಮಡಿಲು, ಹೊಂಗೆ ನೆಳಲು"

೧

**'ದಿವ್ಯಧ್ವನಿ'** ಎಂಬುದು ಜೈನರಲ್ಲಿ ವಿಶೇಷಾರ್ಥದ ಒಂದು ಪರಿಭಾಷಾಪದ. ಕೇವಲಜ್ಞಾನವನ್ನು ಪಡೆದ ಶ್ರೀ ತೀರ್ಥಂಕರಸ್ವಾಮಿಯು ಭವ್ಯಜನಗಳ ಶ್ರೇಯಸ್ಸಾಧನೆಗಾಗಿ ಧರ್ಮೋಪದೇಶಮಾಡುತ್ತಾ ವಿಹಾರಹೊರಟ ಪ್ರಸ್ತಾವದಲ್ಲಿ ಆತನ ಮುಖದಿಂದ ಈ 'ದಿವ್ಯಧ್ವನಿ' ಉಗಮಿಸುತ್ತದೆ. ಆದಿ ತೀರ್ಥಂಕರನ ದಿವ್ಯಧ್ವನಿಯನ್ನು ಜಿನಸೇನಾಚಾರ್ಯರು ಹೀಗೆ ವರ್ಣಿಸಿದ್ದಾರೆ:

ದಿವ್ಯಮಹಾಧ್ವನಿರಸ್ಯ ಮುಖಾಬ್ಜಾತ್
ಮೇಘರವಾನುಕೃತಿರ್ನಿರಗಚ್ಛತ್

ಆತನ ಮುಖಕಮಲದಿಂದ ಮೇಘರವವನ್ನು ಅನುಕರಿಸುವ ದಿವ್ಯಮಹಾಧ್ವನಿಯು ಹೊರಗೆ ಬಂದಿತಂತೆ. ಅದು —

ಏಕತಯೋಪಿ ಚ ಸರ್ವನೃಭಾಷಾಃ
ಸೋಂತರನೇಷ್ಟ ಬಹೂಶ್ಚ ಕುಭಾಷಾಃ

ಆ ದಿವ್ಯಧ್ವನಿ ತಾನು ಒಂದೇ ಆಗಿದ್ದರೂ ಸರ್ವ ನರಭಾಷೆಗಳನ್ನೂ ಬಹುವಾದ (ಪಶುಪಕ್ಷಿಗಳೇ ಮೊದಲಾದವುಗಳ) ಕುಭಾಷೆಗಳನ್ನೂ ತನ್ನೊಳಗೆ ನಡೆಸಿ ನಿಲ್ಲಿಸಿಕೊಂಡಿತ್ತಂತೆ.

ಆ ಮಹಾಧ್ವನಿಯ ಪರಿಣಾಮವನ್ನು ಮುಂದೆ ಹೀಗೆ ಹೇಳುತ್ತಾರೆ:

ಏಕತಯೋಪಿ ಯಥೈವ ಜಲೌಘಃ
ಚಿತ್ರರಸೋ ಭವತಿ ದ್ರುಮಭೇದಾತ್
ಪಾತ್ರವಿಶೇಷವಶಾಚ್ಚ ತಥಾಯಂ
ಸರ್ವವಿದೋ ಧ್ವನಿರಾಪ ಬಹುತ್ವಂ

ನೀರಿನ ರಾಶಿ ಒಂದೇ ಆದರೂ, ಮರಗಳು ಬೇರೆಬೇರೆಯಾದುದರಿಂದ ಆ ನೀರು ಹೇಗೆ ಚಿತ್ರವಿಚಿತ್ರವಾದ ರಸಗಳಾಗಿ ಆಗುತ್ತದೆಯೋ

ಭಾಗೆಯೋ (ಕೇಶಿದಂತಹ) ಪಾತ್ರಗಳ ವಿಶೇಷಗುಣಗಳ ಬೆಸೆಯಿಂದ ಆ ಸರ್ವಜ್ಞನಾದ ತೀರ್ಥಂಕರನ ಧ್ವನಿ (ತಾನು ಒಂದೇ ಆದರೂ) ಬಹುತ್ವವನ್ನು ಪಡೆಯಿತು.

ಇಂತಹ ದಿವ್ಯಧ್ವನಿ ನಿರ್ಗಮಿಸಿದ ಸಮಯದಲ್ಲಿ, ಆ 'ಸಮವಸರಣ' ವೆಂಬ ದಿವ್ಯಸಭೆಯಲ್ಲಿ ಅನೇಕ ದೇವತೆಗಳೂ ಇರುವರು. ಆ ದೇವತೆಗಳಿಂದಲೇ ಆ ದಿವ್ಯಧ್ವನಿಯಾಯಿತೆಂದರೆ, ಆ ಮಾತು ತಪ್ಪಾಗುತ್ತದೆ. ಆ ಮಾತಿನಿಂದ ಅರ್ಹಂತನ ದೇವಗುಣಕ್ಕೆ ಹಾನಿ ಹೇಳಿದ ಹಾಗಾಗುತ್ತದೆ.

ದೇವಕೃತೋ ಧ್ವನಿರಿತ್ಯಸದೇತತ್
ದೇವಗುಣಸ್ಯ ತಥಾ ವಿಹತಿ ಸ್ಯಾತ್
ಸಾಕ್ಷರ ಏವ ಚ ವರ್ಣಸಮೂಹಾತ್
ನೈವ ವಿನಾರ್ಥಗತಿರ್ಜಗತಿ ಸ್ಯಾತ್

ಆ ದಿವ್ಯಧ್ವನಿ ವರ್ಣಗಳ ಸಮೂಹದಿಂದ ಸಾಕ್ಷರವೇ ಆಗಿತ್ತು. ಅದು ಇಲ್ಲದೆ ಹೋಗಿದ್ದರೆ ಅರ್ಥದ ಗಮನಕ್ಕೆ ಆಧಾರವೇ ಇಲ್ಲ.

ಜಿನಸೇನಾಚಾರ್ಯರು ಈ ಪ್ರಕಾರವಾಗಿ ವರ್ಣಿಸಿದ ದಿವ್ಯಧ್ವನಿಯನ್ನು ನಮ್ಮ ಪಂಪ ಹೀಗೆ ವರ್ಣಿಸಿದ್ದಾನೆ:

* * ಅಪಗತತಾಲ್ವೋಷ್ಠ
ಸ್ಪಂದನಮಸ್ಪೃಷ್ಟಕರಣವರ್ಣಂ ಜಗದಾ
ನಂದಕರಂ ಜಳಧರರವ
ಸೌಂದರಮತಿವಿಶದಮಧುರಗಂಭೀರರವಂ

ಎಂದರೆ, ಜಗತ್ತಿಗೆ ಆನಂದವನ್ನು ಉಂಟುಮಾಡುವ ಆ ದಿವ್ಯಧ್ವನಿ ಜಲಧರರವದಂತೆ ಸುಂದರವಾಗಿತ್ತು, ಬಹಳ ಸ್ಪಷ್ಟವಾಗಿತ್ತು, ಮಧುರವಾಗಿತ್ತು, ಗಂಭೀರವಾಗಿತ್ತು. ಆ ಧ್ವನಿ ಹೊರಡುವಾಗ ತಾಲು ಮತ್ತು ಓಷ್ಠಗಳ ಚಲನೆಯಿರಲಿಲ್ಲ. ಆ ಧ್ವನಿಯು ವರ್ಣಗಳನ್ನು ಮುಟ್ಟುತ್ತಿರಲಿಲ್ಲ.

ಈ ಇಷ್ಟು ವರ್ಣನೆಗಳ ತಾತ್ಪರ್ಯವೇನೆಂದರೆ: ದಯಾಮೂರ್ತಿಯಾದ ತೀರ್ಥಂಕರಸ್ವಾಮಿ ತನ್ನ ಮನೋಗತವಾದ ಲೋಕಹಿತಧರ್ಮವನ್ನು ತನ್ನ ಶ್ರೋತೃಗಳಿಗೆ ಅರ್ಥವಾಗುವ ಅವರವರ ಭಾಷೆಗಳ

ಮೂಲಕವಾಗಿ ತಿಳಿಸುತ್ತಿದ್ದನು; ಈ ಕಾರ್ಯದಲ್ಲಿ ಆತನಿಗೆ ಶ್ರಮವಾಗುತ್ತಿರಲಿಲ್ಲ. ಸಂಪ್ರದಾಯದಲ್ಲಿ ಈ 'ದಿವ್ಯಧ್ವನಿ'ಗೆ ಒಂದು ಅತಿಮಾನುಷವಾದ ಅರ್ಥ ಕಟ್ಟಿಬಂದಿದ್ದರೂ, ಜೈನರ ಅನೇಕ ಧರ್ಮಗ್ರಂಥಗಳು ಆ ಪೂರ್ವದ ದಿನಗಳಲ್ಲಿ ಅರ್ಧಮಾಗಧಿ, ಜೈನ ಮಹಾರಾಷ್ಟ್ರೀ, ಜೈನ ಶೌರಸೇನೀ ಮೊದಲಾದ ಪ್ರಾಕೃತಗಳಲ್ಲಿ ರಚನೆಯಾಯಿತು ಎಂಬುದನ್ನು ಗಮನಿಸಿದವರಿಗೆ ತೀರ್ಥಂಕರರ ದಿವ್ಯಧ್ವನಿಯ ಮಾನವೀಯತೆ ಅರ್ಥವಾಗುತ್ತದೆ. ಆತನ ಅಪರಿಮಿತವಾದ ದಯೆಯೇ ಈ **ಪ್ರಾಕೃತ**ಗಳೆಂಬ **ದೇಶಭಾಷೆ**ಗಳ ಸ್ವೀಕಾರಕ್ಕೆ ಕಾರಣವಾಯಿತೆಂಬುದನ್ನು ಪರಿಶೀಲಿಸಿದರೆ, ಈ ದಿವ್ಯಧ್ವನಿಯನ್ನು ಅತಿಮಾನುಷವೆಂದು ಒಪ್ಪಿಕೊಳ್ಳುವುದಕ್ಕೂ ಏನೂ ಸಂಕೋಚಪಡಬೇಕಾಗಿಲ್ಲ.

೨

ಬೌದ್ಧರಲ್ಲಿ ಈ 'ದಿವ್ಯಧ್ವನಿ' ಎಂಬ ಪದ ಬಳಕೆಯಲ್ಲಿ ಇರದಿದ್ದರೂ, ತೀರ್ಥಂಕರರ ಜೀವಾಳವಾದ ಕರುಣೆಯೇ ಮೂರ್ತಿಮಂತವಾದ ಹಾಗಿದ್ದ ಬುದ್ಧನು ತಾನೂ ತನ್ನ ಧರ್ಮಚಕ್ರಪ್ರವರ್ತನಕ್ಕೆ ಆ ಕಾಲದ ದೇಶಭಾಷೆಗಳನ್ನೇ ಕೀಲೆಣ್ಣೆಯಾಗಿ ಉಪಯೋಗಿಸಿಕೊಂಡನು.

ಒಮ್ಮೆ ಬುದ್ಧನ ಬಳಿಗೆ ಇಬ್ಬರು ಬ್ರಾಹ್ಮಣರು ಬಂದರಂತೆ. ಬಂದು, "ಭಗವನ್, ನಿನ್ನ ಧರ್ಮವನ್ನು ಕೇಳುವುದಕ್ಕೆ ನಾನಾ ಹೆಸರಿನವರು, ನಾನಾ ಗೋತ್ರಗಳವರು, ನಾನಾ ಜಾತಿಯವರು, ನಾನಾ ಕುಲಗಳವರು ಬರುತ್ತಾರೆ. ಅವರು ತಮ್ಮತಮ್ಮ ಭಾಷೆಗಳಲ್ಲಿ ಬುದ್ಧವಚನವನ್ನು ಕೆಡಿಸುತ್ತಿದ್ದಾರೆ. ಭಗವಂತನು ಅಪ್ಪಣೆ ಕೊಟ್ಟರೆ, ಬುದ್ಧವಚನವನ್ನು ವೇದಗಳ ಭಾಷೆಯಲ್ಲಿ ರಚಿಸಿಡುತ್ತೇನೆ. ಅಪ್ಪಣೆಕೊಡಬೇಕು" ಎಂದರು. ಅದಕ್ಕೆ ಬುದ್ಧನು "ಹಾಗೆ ಮಾತ್ರ ಮಾಡಬೇಡಿ. ಹಾಗೆ ಯಾವನು ಮಾಡುತ್ತಾನೋ ಅವನು ದುಷ್ಕೃತ್ಯಮಾಡಿದವನಾಗುತ್ತಾನೆ. ಭಿಕ್ಷುಗಳೆ, **ಬುದ್ಧವಚನವನ್ನು ನಿಮ್ಮ ಸ್ವಂತ ಭಾಷೆಯಲ್ಲಿ ತಿಳಿದು ಕಲಿಯುವುದಕ್ಕೆ ನಾನು ಅನುಜ್ಞೆಕೊಡುತ್ತೇನೆ.** (ಅನುಜಾನಾಮಿ ಭಿಕ್ಖವೇ ಸಕಾಯ ನಿರುತ್ತಿಯಾ ಬುದ್ಧವಚನಂ ಪರಿಯಾಪುಣಿತುಂ)" ಎಂದನು.

ಇನ್ನೊಂದು ಸಂದರ್ಭದಲ್ಲಿ ಬುದ್ಧನು "ಯಾವ ಜನಪದ ಭಾಷೆಯಲ್ಲಿಯೂ ಅಭಿನಿವೇಶವಿರಬಾರದು. (ಜನಪದ ನಿರುತ್ತಿಂ ನಾಭಿನಿವೇಸೆಯ್ಯ.) ಬಟ್ಟಲು ಎಂಬ ಒಂದು ಪದಾರ್ಥಕ್ಕೆ ಆಯಾ ಜನಪದಗಳನ್ನು ಅನುಸರಿಸಿ, ಪಾತೀ, ಪತ್ತಂ, ವಿತ್ಥಂ, ಸರಾವಂ, ಧಾರೋಪಂ, ಪೋಣಂ, ಪಿಸೀಲಂ—ಎಂದು ಅನೇಕ ಹೆಸರುಗಳಿರುತ್ತವೆ. ಬುದ್ಧಿಯಿಲ್ಲದವನು ಈ ಅನೇಕ ಪದಗಳಲ್ಲಿ ತನಗೆ ಪರಿಚಿತವಾದ ಪದವೊಂದೇ ಸರಿ ಎಂದು ಹಠಹಿಡಿಯುತ್ತಾನೆ. ಬುದ್ಧಿವಂತನಾದವನು ಆಯಾ ಜನಪದಗಳಲ್ಲಿ ಆಯಾ ಪದಗಳು ಸರಿ ಎಂದು ಅಲ್ಲಲ್ಲಿ ಅದನ್ನು ಒಪ್ಪುತ್ತಾನೆ. ಆದ್ದರಿಂದ ಯಾವ ಜನಪದ ಭಾಷೆಯಲ್ಲಿಯೂ ಅಭಿನಿವೇಶವಿಡಬಾರದು" ಎಂದನು.

ಇಂತಹ ಉದಾರವಾದ ಮನೋಭಾವವಿದ್ದುದರಿಂದಲೇ ಆ ಸಂಬುದ್ಧಾಗಮವು ಆಕಾಲದ ಅನೇಕ ಪ್ರಾಕೃತಗಳಲ್ಲಿ ಮುಖಪಾಠವಾಗಿ ಹಬ್ಬಿ ಹರಡಿತು. ಮುಖಪಾಠವಾಗಿದ್ದ ಮಾತು ಗ್ರಂಥಸ್ಥವಾಗುವ ಹೊತ್ತಿಗೆ, ಈಗ '**ಪಾಲೀ**' ಎಂದು ಪ್ರಖ್ಯಾತವಾಗಿರುವ ಒಂದು ರೀತಿಯ '**ಕಸಿಮಾಡಿದ ಪ್ರಾಕೃತ**' ಹೊಸದಾಗಿ ರೂಪುಗೊಂಡಿತು. ಇದ್ದ ಇತರ ಪ್ರಾಕೃತಗಳ ಜೊತೆಗೆ ಬೌದ್ಧರು ಮಾತ್ರ ಬಳಸುವ ಈ ಒಂದು ಹೊಸ ಪ್ರಾಕೃತವೂ ಬೆಳೆಯಿತು. ಅದರಿಂದ ಆ ಕಾಲದ ದೇಶಭಾಷೆಗಳಾಗಿದ್ದ ಪ್ರಾಕೃತಗಳ ಸಂಪತ್ತಿ ಹೆಚ್ಚಿತು.

೩

ಧರ್ಮಪ್ರಚಾರದಂತಹ ಪಾರಲೌಕಿಕ ಕರ್ಮಕ್ಕೆ ಜೈನರೂ ಬೌದ್ಧರೂ ಯಾವಾಗ ಹೀಗೆ ದೇಶಭಾಷೆಗಳನ್ನು ಬಳಸಿದರೋ ರಾಜರುಗಳು ತಮ್ಮ ಶಾಸನಗಳಿಗೂ ಕವಿಗಳು ತಮ್ಮ ಕಾವ್ಯಗಳಿಗೂ ಅವನ್ನೇ ಬಳಸಲು ಬಹಳ ಕಾಲ ಬೇಕಾಗಲಿಲ್ಲ. ಅಶೋಕ, ಖಾರವೇಲ ಮೊದಲಾದ ರಾಜರ ಶಾಸನಗಳೂ ಸೇತುಬಂಧ, ಗೌಡವಧ, ಸಪ್ತಶತೀ ಮೊದಲಾದ ಕಾವ್ಯಗಳೂ ಭಾರತದ ಸಾಹಿತ್ಯಸಂಪದವನ್ನು ಊರ್ಜಿತಗೊಳಿಸಿದುವು. ಹೀಗೆ ಪ್ರಾಕೃತ ಸಾಹಿತ್ಯ ಬೆಳೆದಹಾಗೆಲ್ಲಾ ಆ ಪ್ರಾಕೃತಗಳನ್ನು ಕುರಿತ ವ್ಯಾಕರಣಗಳೂ ರಚನೆಯಾದುವು. ಪ್ರಖ್ಯಾತರಾದ ಸಂಸ್ಕೃತ

ಕವಿಗಳಾದರೂ ತಮ್ಮ ಕಾವ್ಯಗಳಲ್ಲಿ ಜೀವಕಳೆ ಹೆಚ್ಚಬೇಕೆಂಬ ಉದ್ದೇಶ ದಿಂದ, ತಾವು ಬರೆದ ರೂಪಕಗಳಲ್ಲಿ ಪಾತ್ರಗಳ ಔಚಿತ್ಯವನ್ನು ಅನುಸರಿಸಿ, ಪ್ರಾಕೃತಗಳನ್ನು ಯಥೇಷ್ಟವಾಗಿ ಬಳಸಿದರು. ಹಿಂದೆ ಒಂದು ಕಾಲಕ್ಕೆ ಜನಪದಭಾಷೆಯಾಗಿದ್ದ ಪ್ರಾಕೃತವು ಗೀರ್ವಾಣಭಾಷೆಯೆನಿಸಿದ್ದ ಸಂಸ್ಕೃತದ ಸಮಸಮಕ್ಕೆ ಸ್ಥಾನಮಾನಗಳನ್ನು ಸಂಪಾದಿಸಿಕೊಂಡಿತು.

ಈ ಪ್ರಾಕೃತಕ್ಕೂ ಸಂಸ್ಕೃತಕ್ಕೂ ಇರುವ ವ್ಯತ್ಯಾಸವನ್ನು ರಾಜ ಶೇಖರನೆಂಬ ಕವಿ ತನ್ನ 'ಕರ್ಪೂರಮಂಜರಿ' ಎಂಬ ಕೃತಿಯ ಆದಿಯಲ್ಲಿ ಹೀಗೆ ಹೇಳಿಸಿದ್ದಾನೆ:

"ಪರುಸಾ ಸಕ್ಕಅಬಂಧಾ ಪಾವುಅಬಂಧೋ ವಿ ಹೋಇ ಸುಉಮಾರೊ
ಪುರಿಸಮಹಿಲಾಣಂ ಜೆತ್ತಿಯಂ ಇಹನ್ತರಂ ತೆತ್ತಿಯಂ ಇಮಾಣಂ"

ಸಂಸ್ಕೃತಬಂಧವು ಪರುಷವಾದದ್ದು; ಪ್ರಾಕೃತಬಂಧವೇ ಸುಕುಮಾರ ವಾದದ್ದು. ಪುರುಷರಿಗೂ ಮಹಿಳೆಯರಿಗೂ ಎಷ್ಟು ವ್ಯತ್ಯಾಸವೋ ಇವುಗಳಿಗೂ ಅಷ್ಟೇ.

ಈ ಮಾತು ಬರಿಯ ಚಮತ್ಕಾರವಷ್ಟೇ ಅಲ್ಲ, ಇದು ಅರ್ಥಪೂರ್ಣ ವಾದದ್ದೇ. ತಂದೆ ಸಂಪಾದನೆಗೆ, ಸಂರಕ್ಷಣೆಗೆ, ಶಿಕ್ಷಣಕ್ಕೆ; ತಾಯಿ ಲಾಲನೆಗೆ, ಪಾಲನೆಗೆ, ತುಷ್ಟಿಗೆ, ಪುಷ್ಟಿಗೆ.

ಪ್ರಾಕೃತಗಳು ಸಾಧಿಸಬೇಕೆಂದು ಹೊರಟ ಈ ದಿವ್ಯಧ್ವನಿಗುಣ ವನ್ನು ಸಂಸ್ಕೃತವು ಸಾಧಿಸಲಿಲ್ಲವೆಂದಲ್ಲ. ರಾಮಾಯಣದಂತಹ, ಗೀತೆ ಯಂತಹ ಸುಲಭ ಸರಳ ಸಂಸ್ಕೃತದ ಕೃತಿಗಳು ಹೆಚ್ಚು ಹುಟ್ಟಲಿಲ್ಲವಲ್ಲಾ ಎಂದಷ್ಟೇ ಕೊರತೆ.

ಈ ದಿವ್ಯಕೃತಿಗಳಲ್ಲಿ ಸಮಾಸಗಳೊಡನೆ ಸೆಣಸಿ ವಿಗ್ರಹಗಳನ್ನು ಸಾಧಿಸಬೇಕಾದ ಅಗತ್ಯವಿಲ್ಲ; ಸಂಧಿ ಒಂದು ತಿಳಿದರೆ ಸಾಕು. ಉದಾ ಹರಣೆಗೆ ಗೀತೆಯ ಈ ಶ್ಲೋಕವನ್ನು ನೋಡುವ:

ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ
ಯೇಽಪಿ ಸ್ಯುಃ ಪಾಪಯೋನಯಃ
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಃ
ತೇಪಿ ಯಾಂತಿ ಪರಾಂ ಗತಿಂ

ಒಂದು ಕಷ್ಟವಾದ ಪದವಿಲ್ಲ. ಆದರೂ ಎಷ್ಟು ವಿಶಾಲವಾದ, ಎಷ್ಟು ಉನ್ನತವಾದ, ಎಷ್ಟು ಅಗಾಧವಾದ, ಎಂತಹ ಭಯನಿವಾರಕವಾದ ಧೈರ್ಯದಾಯಕವಾದ ಭಾವನೆ!

ಇಂತಹ ಲಕ್ಷಣಗಳುಳ್ಳದ್ದೇ ದಿವ್ಯಧ್ವನಿ. ಯಾವುದನ್ನು ಆಶ್ರಯಿಸಿದರೆ ಸ್ತ್ರೀಯರಾಗಲಿ, ವೈಶ್ಯರಾಗಲಿ, ಶೂದ್ರರಾಗಲಿ, ಪಾಪಯೋನಿಗಳು ಯಾರೇ ಆಗಲಿ ಈ ದುರ್ಗತಿಯನ್ನು ದಾಟಿ ಆ ಸುಗತಿಯನ್ನು ಮುಟ್ಟುವರೋ ಅಂತಹ ಕಲ್ಯಾಣಕಾರಕವಾದ ದಿವ್ಯಧ್ವನಿಯ ಹಲವು ಮುಖಗಳೇ ಆ ಅಂದಿನ ಪ್ರಾಕೃತಗಳು, ಈ ಇಂದಿನ ವಿವಿಧ ದೇಶಭಾಷೆಗಳು. ಇಂತಹ ಸಾಮರ್ಥ್ಯವುಳ್ಳ ದೇಶಭಾಷೆಗಳನ್ನು ಆಶ್ರಯಿಸಿ, ಅವುಗಳ ಸೇವೆಗೆ ಮೀಸಲಾಗುವುದು—ಇದೇ **ರಾಜವಿದ್ಯಾ-ರಾಜಗುಹ್ಯ-ಯೋಗ.**

'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ' ಎಂದು ಹಿಂದಿನವರು ಹೇಳಿದರು. ಈ ದೇಹ ಈ ಕರ್ಮಭೂಮಿಯಲ್ಲಿ ಬರುವುದಕ್ಕೆ ಕಾರಣಳಾದ ತಾಯಿ ನಮಗೆ ಹಿರಿಯ ವಸ್ತು. ಬಂದವರು ನಾವು ಇರುವುದಕ್ಕೆ ಅವಕಾಶಕೊಡುವ ಈ ಭೂಮಿತಾಯಿ, ಇವಳು ಕೂಡ ನಮಗೆ ಹಿರಿಯಳೇ. ಈ ಇಬ್ಬರು ತಾಯಂದಿರ ಬಲದಿಂದಲೇ ನಾವು ಈ ಕರ್ಮಭೂಮಿಯಿಂದ ಆ ಭೋಗಭೂಮಿಯಾದ ಸ್ವರ್ಗವನ್ನು ಮುಟ್ಟುವುದು. ಆದ್ದರಿಂದಲೇ ಈ ಜನನಿಯೂ ಜನ್ಮಭೂಮಿಯೂ ಸ್ವರ್ಗಕ್ಕಿಂತಲೂ ದೊಡ್ಡದು ಎಂದು ಹೇಳುವುದು.

ಈ ಇಬ್ಬರು ತಾಯಂದಿರಂತೆಯೇ ನಮಗೆ ಹಿರಿಯಳಾದ ಇನ್ನೊಬ್ಬಳು ಉಂಟು. ಆಕೆ ಜನ್ಮಭಾಷಾ ಎಂಬ ತಾಯಿ. ಈ ತಾಯಿಯ ಲಾಲನೆ ಪಾಲನೆ ಇದ್ದರೆ ಮಾತ್ರ ಜನಜೀವನವೂ, ಸಮಾಜಜೀವನವೂ ವ್ಯವಸ್ಥೆಯಿಂದ ಸಾಗುತ್ತದೆ. ಈ ತಾಯಿಯೇ ತಾಯಿನುಡಿ, ದೇಶಭಾಷೆ. ಆದ್ದರಿಂದ 'ಜನನೀ ಜನ್ಮಭೂಮಿಶ್ಚ ಜನ್ಮಭಾಷಾ ಚ ಸ್ವರ್ಗಾದಪಿ ಗರೀಯಸೀ' ಎಂದುಕೊಳ್ಳುವುದು ಹೆಚ್ಚು ಶ್ರೇಯಸ್ಕರ.

# ದೈವ ಪುರುಷ ಬಲ ತೋಲನ

**“ಮೊದಲ್ ಎರಗಿ ದೇವತೆಗೆ, ಪೌರುಷದೆ ನೀನ್ ಗೆಲ್”**

೧

ಇಹ ಇಹವೇ, ಪರ ಪರವೇ—ಎಂಬ ಎರಡೂ ಅತಿಗಳನ್ನು ದಾಟಿ, ಇಹಪರಗಳು ಎರಡನ್ನೂ ಸಮನ್ವಯಿಸುವ ಒಂದು ಮಹಾಪ್ರಯತ್ನವು ಅನಾದಿಕಾಲದಿಂದಲೂ ನಡೆಯುತ್ತಿದೆ. ಎಷ್ಟು ಇಹಕ್ಕೆ ಎಷ್ಟು ಪರ ಸೇರಿದರೆ ಈ ಸಮನ್ವಯ ಸಾರ್ಥಕವಾಗುತ್ತದೆ ಎಂಬುದನ್ನು ಕುರಿತು ಮಹಾಮೇಧಾವಿಗಳು ಮಹಾಪ್ರಯೋಗಗಳನ್ನು ನಡೆಸಿದ್ದಾರೆ, ನಡೆಸುತ್ತಿದ್ದಾರೆ. ಈ ಪ್ರಯೋಗಗಳು ಫಲಕಾರಿಯಾಗಬೇಕಾದರೆ, ಅದರಲ್ಲಿ ಪುರುಷಬಲದ ಹೊಣೆ ಎಷ್ಟು, ದೈವಬಲದ ಹೊಣೆ ಎಷ್ಟು ಎಂಬುದನ್ನು ಅಳೆದು, ಎಣಿಸಿ, ತೂಕಮಾಡಲು ಯತ್ನಿಸಿದ್ದಾರೆ. ಸಣ್ಣ ಜೀವಗಳ ಕಣ್ಣಿಗೆ ಅಸಾಧ್ಯವೇ ಎನ್ನಿಸುವ ಈ ಕಷ್ಟಸಾಧ್ಯವಾದ ದೈವಪುರುಷಬಲ ತೋಲನಗಳನ್ನು ಗುರುತು ಹಾಕಿರುವ ಪ್ರಯೋಗದ ಪುಸ್ತಕಗಳೇ ನಮ್ಮ ‘ಕಾವ್ಯ’ಗಳು. ಇವುಗಳೊಳಗಿರುವ ಆ ಪ್ರಾಚೀನ ಪ್ರಯೋಗಗಳ ಅವಲೋಕನದಿಂದಲೇ ನಾವು ಹಿಂದಿನ ತಪ್ಪನ್ನೇ ಮತ್ತೆ ಮಾಡದೆ, ಮುಂದಿನ ಹೆಜ್ಜೆಯನ್ನು ದೃಢವಾಗಿ ಇಟ್ಟು ಸಾಗುವುದು ಸಾಧ್ಯ.

ಇದನ್ನು ಪ್ರಸ್ತಾಪಿಸುವುದಕ್ಕಾಗಿ ನಾನು ಇಲ್ಲಿ ಎತ್ತಿಕೊಂಡಿರುವ ಎರಡು ಕನ್ನಡ ಕೃತಿಗಳೂ ಗಾತ್ರದಲ್ಲಿ ಸಣ್ಣವು. ಮೂರ್ತಿ ಚಿಕ್ಕದಾದರೂ ಸ್ಫೂರ್ತಿ ಅಡಕವಾಗಿರತಕ್ಕಂಥವು; ಹತ್ತು ಹೀಚು ಹೊತ್ತುಕೊಳ್ಳುವ ಬದಲು ಒಂದು ಹಣ್ಣನ್ನೂ ಒಂಬತ್ತು ಹೂಗಳನ್ನೂ ಪಡೆದ ಬಳ್ಳಿಯಂತೆ ಇರತಕ್ಕವು.

ನಾನು ಆಯ್ದುಕೊಂಡಿರುವ ಎರಡರಲ್ಲಿ ಮೊದಲನೆಯದು ಶ್ರೀ ಡಿ. ವಿ. ಗುಂಡಪ್ಪನವರ ‘ಶ್ರೀರಾಮ ಪರೀಕ್ಷಣಂ.’ ಇದು ವೃತ್ತ, ಕಂದ, ಸೀಸಪದ್ಯ, ದ್ವಿಪದಿ ಮುಂತಾದ ಪದ್ಯಜಾತಿಗಳ ಜೊತೆಗೆ ಗದ್ಯವನ್ನೂ ಒಳಗೊಂಡದ್ದು. ಈ ಹೊಸ ಚಂಪೂ ಗ್ರಂಥವಾದರೂ ನಮ್ಮ ಹಳೆಯ ಚಂಪೂಗಳ ಹಾಗೆಯೇ ಸಂಸ್ಕೃತ ಹಳಗನ್ನಡ ಮಿಶ್ರವಾದದ್ದು.

ಬಂಥ ಪ್ರೌಢವಾದದ್ದು. ಇದು ಅಚ್ಚಿನಲ್ಲಿ ಫುಲ್ಸ್‌ಕ್ಯಾಪ್ ೧/೮ ಆಕಾರದ ೫೪ ಪುಟ ಇದೆ.

ಎರಡನೆಯದು ದಿವಂಗತ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಬರೆದ 'ಅಶ್ವತ್ಥಾಮನ್'. ಇದು ನಾಟಕ. ಇದರ ಭಾಷೆಯೂ ಹಳಗನ್ನಡವೇ ಆದರೂ ಸಂಸ್ಕೃತದ ಬಾಹುಳ್ಯ ಕಡಮೆಯಾಗಿರುವ ಕಾರಣ, ಕೇಳುತ್ತಿದ್ದರೆ ತಮಿಳನ್ನೇನಾದರೂ ಕೇಳುತ್ತಿರುವೆವೋ ಎಂಬ ಭ್ರಮೆಯನ್ನು ಉಂಟುಮಾಡುವ ಅಯ್ದು ಅಚ್ಚಕನ್ನಡ. ಇದು ಅಚ್ಚಿನಲ್ಲಿ ಕ್ರೌನ್ ೧/೮ ಆಕಾರದ ೫೦ ಪುಟ ಇದೆ. ಸರಿಯಾಗಿ ೧೦೦೦ ಪಂಕ್ತಿ ಪದ್ಯ.

೨

ಶ್ರೀ ಡಿ. ವಿ. ಜಿ. ಅವರ 'ಶ್ರೀರಾಮಪರೀಕ್ಷಣ'ದಲ್ಲಿ ಆರು ವಿಭಾಗಗಳಿವೆ. ಇವುಗಳನ್ನು 'ಪ್ರಶ್ನೆ'ಗಳೆಂದು ಕರೆದಿದ್ದಾರೆ: ಅಹಲ್ಯೆಯ ಪ್ರಶ್ನೆ, ತಾರೆಯ ಪ್ರಶ್ನೆ, ಮಂಡೋದರಿಯ ಪ್ರಶ್ನೆ, ಸೀತೆಯ ಪ್ರಶ್ನೆ, ಲೋಕಜನದ ಪ್ರಶ್ನೆ ಮತ್ತು ಕಡೆಯದಾಗಿ ಹನುಮಂತನ ಪ್ರಶ್ನೆ. ಪ್ರತಿಯೊಂದು ವಿಭಾಗದಲ್ಲಿಯೂ ಮಾನವನ ನಡತೆಗೆ ತಗುಲಿದ ಒಂದೊಂದು ಪ್ರಶ್ನೆಯನ್ನು ಆಯಾ ಸಂಬಂಧಿಸಿದವರು ರಾಮನ ಮುಂದೆ ತರುತ್ತಾರೆ. ಮೊದಲನೆಯ ವಿಭಾಗದಲ್ಲಿ ರಾಮನ ಪರವಾಗಿ ವಿಶ್ವಾಮಿತ್ರನೂ ಉಳಿದ ಕಡೆಗಳಲ್ಲಿ ಸ್ವಯಂ ರಾಮನೂ ಅವುಗಳಿಗೆ ಉತ್ತರ ಕೊಡುತ್ತಾರೆ.

ಮೊದಲನೆಯ ಅಹಲ್ಯಾಕಥನದಲ್ಲಿ ಗೌತಮಮುನಿಯು ತನ್ನ 'ಸಂಗಾತಿ'ಯಾದ ಅಹಲ್ಯೆಯ 'ಇಂಗಿತವ ಲೆಕ್ಕಿಸದೆ ವಿರಸನಾಗಿ' ಇರುವಾಗ, "ಪತಿಯ ಉಪೇಕ್ಷೆಯೆ ಬಿತ್ತ, ಸತಿಯ ಅಪೇಕ್ಷೆಯೆ ಮೊಳಕೆ, ಯೌವನವೆ ಶಿಖಿ, ಅವಳ ಮನಸೆ ಮಯಣ" ಆಯಿತು. ಆಗ "ವಶ್ಯಳು ಇವಳು ಎಂದು ಶಕ್ರಸಿಗೆ ಆಯ್ತು ವಕ್ರಮತಿ; ಆದರಿಂದ ಋಷಿಜೀವ ಕೆಂಡವಾಯ್ತು." ಹೀಗೆ ಈ ಮೂವರೂ, ಎಂದರೆ ಗೌತಮ, ಅಹಲ್ಯಾ ಮತ್ತು ಇಂದ್ರ, "ಬ್ರಹ್ಮದಾಶನ (ಎಂದರೆ ಬ್ರಹ್ಮನೆಂಬ ಬೆಸ್ತನ) ಗಾಳಕೆ ಇವರು ಮೀನು ಆದವರು, ಪ್ರಕೃತಿ ಸೂತ್ರದೆ ಕುಣಿದ ನಟಿಗಳು ಇವರು" ಬಹುಕಾಲ ಪಾಡುಪಟ್ಟು, "ಪಾಪ ಪಶ್ಚಾತ್ತಾಪ ಬಾಷ್ಪಮಾರ್ಜಿತರು" ಆದರು. ಹೀಗೆ, ಮಾಡಿದ ಪಾಪವನ್ನು ಪಶ್ಚಾತ್ತಾಪದ ಕಣ್ಣೀರಿನಿಂದ

ತೊಳೆದ ಅನಂತರದ ಕಾಲದಲ್ಲಿ, "ಬಿಚ್ಚ ಮನೆಯನು ಮರಳಿ ನಿಲ್ಲಿಪುದೆ ಪುರುಷಧರ್ಮಂ" ಎಂದು ವಿಶ್ವಾಮಿತ್ರನಿಂದ ಪ್ರಬೋಧಿಸಲ್ಪಟ್ಟ ರಾಮ ಬಾಲಕನು ಬಂದಾಗ ಅಹಲ್ಯೆ ಉದ್ಧಾರವಾದಳು. ಅಷ್ಟೇ ಅಲ್ಲ, ಇಂದ್ರನೂ ಕ್ಷಮ್ಯನಾದ; ಗೌತಮನ ದುಷ್ಕೃತವೂ ಹರಿಯಿತು. ಕವಿ ಹೇಳುತ್ತಾರೆ: "ಈ ಆಖ್ಯಾನಕಮಿದು ಪುಣ್ಯಪಾಪದರ್ಶಕ ಮುಕುರಂ". ಈ ಕಥೆ ಪುಣ್ಯಪಾಪಗಳನ್ನು ಕಾಣಿಸುವ ಕನ್ನಡಿ.

ಎರಡನೆಯ ಭಾಗದಲ್ಲಿ, ವಾಲಿಯು ವಧೆಯಾದ ಬಳಿಕ ತಾರೆ "ವಾಲಿಯುನ್ನು ನೀನು ವಧಿಸಿದ್ದು ಅಧರ್ಮವಲ್ಲವೆ?" ಎಂದು ಪ್ರಶ್ನಿಸಿದಾಗ, ರಾಮ "ಅಲಿಪುದು ಎಲೌ ತಾಯೆ, ನೀ ನೊಂದಳ್, ಅರಿತೆನ್ ಅದನ್. ಎನ್ನ ಮುಳ್ಳಾಗಿಸಿತು ದೈವವು; ಅದಕೆ ಸೀತೆಯ ಅಗಲಿಕೆ ಏಕೆ? ಸುಗ್ರೀವನ ಎಡರು ಏಕೆ? ವಾಲಿ ಸಾಯಲಿಕೆ ಎನ್ನ ಬಾಣ ಏಕೆ? ಆರು ಎತ್ತಲ್ ಎಸೆದ ಕಲ್ಲು ಆರ ತಲೆಯ ಒಡೆಯುವುದೊ! ಲೋಕಘಟನೆಗಳ್ ಎಲರು ಬೀಸುವಂತೆ! ಎನ್ನ ಎದೆಯ ನೀ ತೆರೆದು, ನೋಡಲಾದೊಡೆ ನೋಡು: ನಿನ್ನ ಮರುಕವ ಮೀರ್ದ ಮರುಕವು ಅಲ್ಲಿ" ಎಂದು ತನ್ನ ಪೇಚಾಟವನ್ನು ತೋಡಿಕೊಳ್ಳುತ್ತಾನೆ. ಮತ್ತೆ ತಾರೆ "ವಾಲಿ ರುಮೆಯರ ಸಖ್ಯವನ್ನು ನೀನು ದೂಷಿಸಿದೆಯಲ್ಲ! ಅಂತಃಪುರದ ಮರ್ಯಾದೆಯನ್ನು ಹೀಗೆ ಮುರಿಯಬಹುದೆ?" ಎಂದಾಗ "ರುಮೆಯ ನಿಂದಿಸಲು ಎನಗೆ ಮನಂ ಎಂದುಂ ಆದುದಲ್ಲ; ಎನ್ನಂತೆ ವಿರಹಿತನೊಳು ಅನುತಾಪ ಸಾಜವಾಯ್ತು" ಎಂದು ವಾಲಿಯ ಪಾಪಕ್ಕಿಂತ ಸುಗ್ರೀವನ ದುಃಖವೇ ತನ್ನ ವಾಲಿವಧೆಗೆ ಪ್ರಚೋದಕವಾಯಿತೆನ್ನುತ್ತಾನೆ. ಅದೂ ಅಲ್ಲದೆ "ಕ್ಷಣದಿಂ ಕ್ಷಣಕೆ ವಿಧಾತಂ ಕೊನೆತೋರದೆ ನೆಯ್ಯುವ ಈ ಕಥಾತಂತುಗಳೊಳ್ ಮನುಜಂ ಪೂರ್ವ ಅಪರ ಶೋಧನೆಗೆಯ್ಯಲ್ ಪಟುವೆ? ಅವನ ಕಣ್ ಎವೆಯಿಡದೆ?" ಎಂದು, ದೈವ ಪುರುಷನನ್ನು ಏತಕ್ಕೋಸ್ಕರ ಹೇಗೆಹೇಗೆ ನಡೆಸುವುದೋ ತಿಳಿಯಲುಬಾರದು, ಒಮ್ಮೆಯೂ ರೆಪ್ಪೆ ಹೊಯ್ಯದೆ ಸದಾ ಅಪ್ರಮತ್ತನಾಗಿರುವುದು ಮನುಜನಿಗೆ ಸಾಧ್ಯವೇ ಇಲ್ಲ ಎನ್ನುತ್ತಾನೆ.

ಮೂರನೆಯ ವಿಭಾಗದಲ್ಲಿ ಪುನಃ "ದೈಹಿಕವಾಗಿ ಅಪರಾಧ ಮಾಡಿದ ಇಂದ್ರನನ್ನೂ ಅಹಲ್ಯೆಯನ್ನೂ ಕ್ಷಮಿಸಿದವನು ಮಾನಸಿಕವಾಗಿ

ಅಪರಾಧ ಮಾಡಿದ ರಾವಣನನ್ನು ಕ್ಷಮಿಸದೆ ಹೋದೆಯಲ್ಲಾ?" ಎಂದು ಮಂಡೋದರಿ ರಾಮನನ್ನು ದೂರಿದಾಗಲೂ "ಆಲಿಪುದು ಎಲೌ ತಂಗಿ, ದೈವ ಕಾರಾಗಾರ ನಿಗಳ ಯಂತ್ರಿತಂ ಆಂ, ಸ್ವತಂತ್ರನ್ ಅಲ್ತು; ಆರಾರ ಮೋಹಜಾಲದ ತೊಡಕುಗಳೊಳೊ ವಿಧಿ ಪಿಡಿದು ಎನ್ನ ಸೆಳೆದಾಡು ತಿರ್ಪನ್ ಇಂತು" ಎಂದು ವಿಧಿಯನ್ನು ತನಗೆ ಪತಿಯಾಗಿ ಗುರುತಿಸಿ, "ಪತಿ ಕೃತ್ಯ ಪಥಗತಿಯೊಳು ಎನಗೆ ಆಯಿತು ಅನಿವಾರ್ಯವು, ಇಂತು ನಾನಾ ಪ್ರಾಣಿಘಾತಕಾರ್ಯ" ಎಂದು ಹೇಳಿ, "ಬರಿ ನಿಮಿತ್ತವೆ ನಾನು" ಎಂದು ತನ್ನ ಕರ್ಮವನ್ನೂ ಕರ್ಮಫಲವನ್ನೂ ಈಶ್ವರನಿಗೆ ಒಪ್ಪಿಸುತ್ತಾನೆ.

ಮುಂದೆ ಸೀತಾಪರಿತ್ಯಾಗದ ಪರೀಕ್ಷೆ ಬಂದಾಗಲೂ "ಪುರುಷಂ ಧರ್ಮದ ತುಲೆಯೊಳ್ (ಎಂದರೆ ತಕ್ಕಡಿಯಲ್ಲಿ) ನಿಜಭೋಗ, ಲೋಕ ಸಂಸ್ಥಿತಿ ಎಂಬ ಈ ಎರಡು ಫಲಂಗಳ ತೂಗಿಸಿ, ಗುರುತರವಂ ಗ್ರಹಿಸು ವುದು (ಅದೆ) ಸುಕೃತ ವಿವೇಕಂ ಅಲ್ತೆ" ಎಂದು ತನ್ನ ಕರ್ತವ್ಯವನ್ನು ಇತ್ಯರ್ಥಿಸಿ, ತನ್ನ ಭೋಗಕ್ಕಿಂತ ಲೋಕಸಂಸ್ಥಿತಿಯೇ ದೊಡ್ಡದೆಂದು, ಸೀತೆಯಂತೆಯೇ ತಾನೂ ವಿವಾಸದ ದುಃಖವನ್ನು ಅನುಭವಿಸುತ್ತಾನೆ; "ಸಂಸಾರಭರಣದೊಳೆ ಸಂನ್ಯಸನನಯ"ವೆಂಬುದನ್ನು ತೋರುತ್ತಾನೆ. ಇಲ್ಲಿ ದೈವವು ಪುರುಷನಿಗೆ ಅನುಗ್ರಹಿಸಿರುವ ವಿಮರ್ಶಾಸ್ವಾತಂತ್ರ್ಯವನ್ನು ರಾಮನು ಸದುಪಯೋಗಪಡಿಸಿಕೊಳ್ಳುತ್ತಾನೆ.

ಅದೇ ಸೀತಾಪರಿತ್ಯಾಗದ ಪ್ರಕರಣವನ್ನು ಕುರಿತು, ಪುರಜನರು ತಾವು ಅನ್ಯಾಯವಾಗಿ ಅಪವಾದಹರಡಿದುದಕ್ಕೆ ತಮ್ಮನ್ನು ನಿಂದಿಸಿ ಕೊಂಡಾಗ, ರಾಮ "ಆರ್ ಅರಿವರ್, ಎಂದು ಕರ್ಮದ ಭೂರುಹಂ ಏಳ್ದು ಆವ ಫಲವ ತಾಂ ನೀಡುಗುವೋ? ಕ್ರೂರಿಯೊ ನಾನ್? ಅವಿಚಾರಿಯೊ? ನಾರಿಯರಿಂಗೆ ಆವ ದುಃಖವು ಎನ್ನಿಂದೆ ಆಯ್ತೊ?" ಎಂದು ತಾನು ಈ ವಿವಾಸದ ಅಳಲನ್ನು ಸೀತೆಗೆ ವಿಧಿಸಿದುದಕ್ಕೂ ತಾನೇ ತನಗೆ ವಿಧಿಸಿ ಕೊಂಡುದಕ್ಕೂ ತನ್ನದೇ ಯಾವುದೋ ಕರ್ಮ ಕಾರಣವಿರಬೇಕೆಂದು ತರ್ಕಿಸಿ, ಅದರ ತಳವನ್ನು ಹೀಗೆ ಶೋಧಿಸುತ್ತಾನೆ: "ರುಮೆಯ ಅಪ ವಾದವನ್ ಆಲಿಸಿ, ಸಮಲಿನವಂ ಗೈದೆನ್ ಎನ್ನ ರಸನೆಯನ್ ಅಂದು

ಅಂ. ರುಮೆಯ ಆ ಶಾಪವೊ ಎನುವವೊಲ್ ಅಘುರಿತು ತತ್ಸದೃಶ ಶೂಲವು ಎನ್ನಯ ಕಿವಿಗಂ" ಎಂದು ಸೀತಾಪರಿತ್ಯಾಗದ ಭೂರುಹಕ್ಕೆ ಬೀಜವಾದ ಅಪವಾದಕ್ಕೆ ಕಾರಣವನ್ನು ಕಾಣುತ್ತಾನೆ.

ಹೀಗೆ ಬಾಲ್ಯದಿಂದಲೂ "ನರನ ಎದೆಯೆ ರಾಗವಾಯೆಗಳ ವಲ್ಮೀಕಂ" ಎಂಬುದನ್ನೂ "ಮಾನವ ಜೀವಿತವು ಸೃಷ್ಟಿಸಿಂಧು ವೀಚೀ ವಶದಲ್ಲಿರುವ ಕಿರುದೋಣಿ"ಯೆಂದೂ ಕಂಡು, "ವಿಶ್ವವಿಭು ಪರಬೊಮ್ಮ ನೆಂದು ಮನದಿ ಬಗೆದು, ಪ್ರಭುವಾದೊಡಂ ಭೃತ್ಯನಂತೆ ಧರೆಯ ಪರಿ ಚರಿಸಿ" ಬಾಳಿದ ಶ್ರೀರಾಮಚಂದ್ರನನ್ನು ಕೊನೆಯ ವಿಭಾಗದಲ್ಲಿ ಹನೂ ಮಂತನು ಕೇಳುವ ಪ್ರಶ್ನೆ ತುಂಬ ಯುಕ್ತವಾದದ್ದು. ಕೇಳುವವನು ಉತ್ತಮ ಶಿಕ್ಷಾರ್ಥಿ, ಹೇಳುವವನಂತೂ ಆಜೀವಯೋಗಿ.

ಹನೂಮಂತನ ಪ್ರಶ್ನೆ ಸಾಧಾರಣವಾದುದಲ್ಲ: "ಧರ್ಮದ ಸ್ವರೂ ಪವು ಏಂ, ಪ್ರಭು? ಕರ್ಮದ ಬಲೆಯಿಂದೆ ಅದೆಂತು ಜೀವಿಗೆ ಮೋಕ್ಷಂ? ಮರ್ಮವು ಅದು ಏನ್? ಜಗದೊಳು ನಿರ್ಮಲ ತತ್ತ್ವವನ್ ಅದೆಂತು ಕಾಣ್ಬುದು, ಗುರುವೇ?" ಅದಕ್ಕೆ ರಾಮಚಂದ್ರಯೋಗೀಶ್ವರನು ಕೊಡುವ ಉತ್ತರವೂ ಅಷ್ಟೇ ಅಸಾಧಾರಣವಾದುದು: "ಆಲೈಸು ಸಖನೆ, ಧರ್ಮದ ಮೂಲಂಗಳ್ ಗೂಢಂ ಇಹವು ಸೃಷ್ಟಿಕ್ರಮದೊಳ್. ಈ ಲೋಕಸೃಷ್ಟಿ ದೇವನ ಲೀಲಾಂಶಂ. ಧರ್ಮವು ಅವನನ್ ಐದಿಪ ಪಯಣಂ" ಎಂದು ಅದನ್ನು ವಿವರಿಸತೊಡಗಿ, "ತಳೆದು ಒಳಗೆ ಈಶಸ್ಮೃತಿಯಂ, ತೊಳಲುತೆ ಬಾಹ್ಯದಲಿ ಲೋಕಜೀವಿತ ಪಥದೊಳ್, ತಿಳಿವುಂ ನಲಿವುಂ ಕೂಡಿದ ಬೆಳಕು ಇಳೆಗೆ ಎನಿಪ ಯಮಿಗೆ ಬಾಳುವೆ ಹೊರೆಯೇಂ?" ಎಂದು 'ಸಂಸಾರ ಭರಣದಲ್ಲಿ ಸಂನ್ಯಸನ ನಯ'ವೇನೆಂಬುದನ್ನು ಸೂಚಿಸಿ; "ಈ ನಂಬುಗೆ ಯಿಂ, ಮಾರುತಿ, ನಾನ್ ಎಸಗಿದೆನ್ ಎಲ್ಲ ಲೌಕಿಕದ ಕಜ್ಜಗಳಂ. ಜ್ಞಾನದ ಶಿಖರದಿನ್ ಮಾನುಷ್ಯತೆ ಜಾರಿದೊಡೆ, ಅದನ್ ಎಣಿಸದಿರ್ಕೆ" ಎಂದು ಮಾನುಷ್ಯದ ಮಿತಿಯನ್ನು ಮತ್ತೆಯೂ ಒತ್ತಿ ಹೇಳಿದಾಗ; ಹನೂಮಂತನು "ಪುರುಷತೆಯೊಳು ನೀಂ ಬೆಳಗಿದೆ ಪರಸತ್ತ್ವದ ಪರಿಯು, ದೇವ! ಲೋಗರ್ ನಿನ್ನ ಈ ಚರಿತೆಯು ದೀಪದೆ ತಂತಮ್ಮ ಇರವಂ ಬೆಳಗಿರಲು, ಜೀವಿತಂ ವರಂ ಅಲ್ತೇ!" ಎಂದನು.

ಹೀಗೆ, ಈ ಕೃತಿ, 'ಶ್ರೀರಾಮಪರೀಕ್ಷಣಂ', ಲೋಕದ ಜನ ರಾಮ ಚರಿತ್ರೆಯ ದೀಪದಲ್ಲಿ ತಮ್ಮ ಬದುಕನ್ನು ಬೆಳಗಿಕೊಳ್ಳಲಿ ಎಂದು ಆದದ್ದು. ಪ್ರಮಾಣದಲ್ಲಿ ಪುಟ್ಟದಾದ ಈ ಕೃತಿ, ವಾಲ್ಮೀಕಿಯೆಂಬ ಗಿರಿಯಲ್ಲಿ ಹುಟ್ಟಿ ರಾಮನೆಂಬ ಸಾಗರಕ್ಕೆ ಹೋಗುವ ರಾಮಾಯಣ ಮಹಾನದಿಯಿಂದ ಹೊಸಕನ್ನಡ ಕವಿಯೊಬ್ಬರು ನಡೆಸಿ ತಂದ ಕೆಲವು ನೀರು ತುಂಬಿದ ಕಾಲುವೆ.

೩

ನಾನು ಇಲ್ಲಿ ಆರಿಸಿಕೊಂಡಿರುವ ಎರಡನೆಯ ಪುಸ್ತಕ 'ಶ್ರೀ' ಅವರ "ಅಶ್ವತ್ಥಾಮನ್". ಇಲ್ಲಿಯೂ ದೈವಬಲ ಪುರುಷಬಲಗಳ ಪರಸ್ಪರ ಪರಿಶೋಲನವೇ ಮುಖ್ಯ ವಸ್ತು. ಇದಕ್ಕೆ ಅಶ್ವತ್ಥಾಮ ಒಬ್ಬ ನಿಮಿತ್ತ, ಅಷ್ಟೆ. ಗ್ರೀಕರ ಮಹಾಕವಿ ಸೊಪೊಕ್ಲಿಸನ 'ಏಜಾಕ್ಸ್' ಎಂಬ ರುದ್ರನಾಟಕವನ್ನು ಆಶ್ರಯಿಸಿ, ಮಹಾಭಾರತದ ಸೌಪ್ತಿಕ ಪರ್ವವೆಂಬ ಬಳ್ಳಿಯನ್ನು ಹೊಂದಿಸಿ, ಹಬ್ಬಿಸಿ, ಹೂಬಿಡಿಸಿದ್ದು ಈ ನಾಟಕ ಕೃತಿ. ಇದರಲ್ಲಿ ಸೌಪ್ತಿಕ ಪರ್ವದ ಕಥೆಯೇ ಮುಖ್ಯವಾದರೂ, ಇತರ ಪೂರ್ವಪರ್ವಗಳ ಕಥೆಯೂ 'ಸಿಂಹಾವಲೋಕನಕ್ರಮ'ದಿಂದ ಒಳಗಾಗಿ, ಮೇಲೆ ಹೇಳಿದ ಎರಡೂ ಬಲಗಳನ್ನು ತೂಗಿ ನೋಡುವುದಕ್ಕೆ ಆಡಕವಾಗಿ ಒದಗುತ್ತದೆ.

ದುರ್ಯೋಧನನು ಭೀಮನ ಭೀಮಗದೆಯಿಂದ ತೊಡೆ ಮುರಿದು ಬಿದ್ದ ಮೇಲೆ, ಭೀಮನ ಪದಾಘಾತದಿಂದ ಅವನ ಮಕುಟಭಂಗವಾದ ಬಳಿಕ, ಅಶ್ವತ್ಥಾಮನು "ಕ್ರೋಧಾತ್ಮಪರವಶನ್, ತನ್ನನ್ ಆಳ್ದನ ಕೊಲೆಯ ಮಾನಭಂಗಕೆ ಮುಳಿದು, ಪಾಂಡವಧ್ವಂಸಮನ್ ಮಾಡಿ ಮೆಚ್ಚಿಪೆನೆಂದು ಸಾರಿದನ್, ಕೈಮುಟ್ಟಿ, ಪ್ರಿಯತಮಸ್ವಾಮಿಯೊಳ್".

ಹೀಗೆ ಪ್ರತಿಜ್ಞೆಮಾಡಿ ಹೊರಟು, ಪಾಂಡವರ ಪಾಳೆಯದ ಹತ್ತಿರ ಬಂದಾಗ, ಅವನ ಇಷ್ಟದೈವವಾದ ರುದ್ರನು ಕಾಣಿಸಿಕೊಂಡು, "ಪ್ರಿಯ ವೀರ, ದಾಳಿ ಏನ್? ವರಂ ಆವುದು ಈವೆನ್?" ಎಂದು ವರದನಾಗಿ ಬಂದರೆ, "ಪಾಂಡವರ ಲೋಕಕೆ ಎನ್ನಿಂ ಪ್ರಳಯಂ" ಎಂದನು. ಅದಕ್ಕೆ ರುದ್ರನು "ಕೆಲರ್ ಉಳಿದು" ಎಂದರೆ, "ನೋಡುತಿರು, ನೋಡುತಿರು,

ಎಲೆ ರುದ್ರ, ದೂರದೊಳ್ ನೋಡುತಿರು, ವೀರ್ಯಂ ಮಾನುಷಂ ಅದೆಂತು ಇರ್ಕುಂ ಎಂಬುದನ್" ಎಂದು ತನ್ನ ದೈವವನ್ನೇ ಕಡೆಗಣಿಸಿ, ಮದಿಸಿ ನಕ್ಕಾಗ, ರುದ್ರನು ಅವನ ಮದವನ್ನು ಕಂಡು, ತನ್ನ ಮಾಯೆಯನ್ನು ಬೀಸಿದನು. ಅದರಿಂದ ಮೋಹಗೊಂಡ ಅಶ್ವತ್ಥಾಮನು ಪಾಂಡವರ ಪಾಳೆಯಕ್ಕೆ ನೆಗೆದು, ಒಳಗೆ "ಒರಗಿದ್ದ ಪಶುಗಳನ್, ಪೆಂಡಿರನ್, ಮಕ್ಕಳನ್" ಪಾಂಡವರೆಂದೇ ಭ್ರಮಿಸಿ, "ಇರಿದಿರಿದು ಕೊಂದನ್." ಆಗ ರುದ್ರನು ಅವನ ಹೊಲೆಗೆಲಸವನ್ನು ತನ್ನ ಕೆಳೆಯನಾದ ಕೃಷ್ಣನಿಗೆ ತೋರಿಸಿ, ಹೀಗೆಂದನು :

"ಇಂತಪ್ಪ ನೋಟಂಗಳನ್ ನೋಡಿ, ದೈವದೊಳ್
ಸೊರ್ಕುನುಡಿ ನುಡಿಯದಿರ್ ; ಕೊಬ್ಬದಿರ್, ನಿನಗೊರ್ಮೆ
ಸಿರಿಯೆನಿತು, ಬಲಮೆನಿತು, ಕಯ್ಯೆನಿತು ನಡೆದೊಡಂ.
ಒಂದು ಪಗಲ್ ಎತ್ತುವುದು, ಒಂದು ಪಗಲ್ ಉರುಳಿಪುದು
ಮಾನುಷಮನ್ ಎಲ್ಲಮನ್. ಮಿತಿಯರಿದು ನೆಗಳ್ವರ್ಗೆ
ದೇವರ್ಕಳ್ ಒಸೆದಪರ್. ಮುರಿದಪರ್ ಮಿಕ್ಕರನ್"

ಕೃಷ್ಣನಾದರೂ ಅಶ್ವತ್ಥಾಮನ ಪಾಡಿಗೆ ಮರುಗುವವನೆ. ರುದ್ರನನ್ನು ಮದದಿಂದ ಎದುರಿಸಿ ಬಿದ್ದ ಆ ಪಾಂಡವದ್ವೇಷಿಯನ್ನು ಹೇಗಾದರೂ ಕಾಪಾಡಬೇಕೆಂದು ಕೃಷ್ಣನು ಅಶ್ವತ್ಥಾಮನ ಮಿತ್ರನಾದ ಏಕಲವ್ಯನನ್ನು ಕರೆದು, "ಏಗಳ್ ಮನುಷ್ಯನ್ ತಾನ್ ಮನುಷ್ಯನೆ ಎಂಬುದನ್ ಮರೆತು, ಕಡುಕೊಬ್ಬಿ, ಒಳ್ಳಿತರ್ಕೆ ಇಲ್ಲನ್–ಆಗಳೇ ದೇವರ್ಕಳ್ ಅವನ ಬಾಳ್ಗೆ ಎಡರೊಡ್ಡಿ ಕೆಳಗೆ ಉರುಳಿಪೊಯ್ವರ್." ಆದ್ದರಿಂದ ಮನುಷ್ಯನಾದವನು ತನ್ನ ಸಾಮರ್ಥ್ಯದ ಮಿತಿಯನ್ನು ತಿಳಿದು ದೈವವನ್ನು ಪ್ರತಿಭಟಿಸದಿರುವುದೇ ವಿವೇಕವೆಂದು ಹೇಳಿ, "ಅಶ್ವತ್ಥಾಮನು ಯಾವಾಗಲೂ ಹೀಗೆಯೇ" ಎಂದು ಎರಡು ಉದಾಹರಣೆಗಳನ್ನು ಕೊಡುತ್ತಾನೆ: "ಎಳವೆಯೊಳೆ, ಪರಸುತ್ತೆ ತಂದೆ, 'ಬಿಲ್‌ಜಾಣನಾದೆ, ಗೆಲ್: **ಮೊದಲ್ ಎರಗಿ ದೇವತೆಗೆ, ಪೌರುಷದೆ ನೀನ್ ಗೆಲ್.'** ಅಯ್ಯನ್ ಇಂತೆನೆ, ಸೊರ್ಕಿ, ಮಗನ್ ಎನ್ಬನ್: 'ದೇವತೆಯ ಬಲಂ ಇರ್ದೊಡೆ, ಅಯ್ಯ, ಪೇಡಿಯುಂ ಗೆಲ್ಪಪನ್. ಅವರ್ಗಳ ನೆರಂಬಾರದೆ ಸಹಾಯವನ್ನು ಎದುರುನೋಡದೆ) ಆ ಗೆಲ್ಲವೆಣ್ಣ ಮುಂದಲೆಯನ್

ಈಳ್ವೆನ್!' ಏನ್ ಗರ್ವಂ! ಇನ್ನೊರ್ವೆ ಮಹದೇವ ರುದ್ರನ್ ಯುದ್ಧದೊಳ್ ಮೇಲಿರ್ದು, 'ಇತ್ತ ಪಗೆ, ಇತ್ತ ಪೊಯ್. ಕೊಳ್ ಗೆಲವನ್, ಇತ್ತೆನ್' ಎಂದು ಉರ್ಬಿಸುತ್ತೆ ಬರೆ, ಸಿಡುಕಿಸಿಂದೆ ಆಳ್ ಆಡಬಾರದುದನ್ ಆಡಿ, 'ಎಲೆ ರುದ್ರ, ಅದೊ ಅವರ ಬೆಂಬಲಂ ಪೋಗು; ಅಶ್ವತ್ಥಾಮನ್ ಇರ್ದ ಮೊನೆ ಮುರಿಯದು' ಎಂದನ್. ಇಂತಪ್ಪ ನುಡಿಗಳಿನ್, ಆಳಾಗಿ ಪುಟ್ಟಿ ಆಳ್ಗೆ ಮೀರಿದ ಪೆರ್ಮೆ ಬಗೆಗಳಿನ್, ರುದ್ರನ ಕನಲ್ಕೆಯನ್ ತಲೆಗೆ ತಂದುಕೊಂಡನ್" ಎಂದು ಹೇಳಿ, "ಈ ದಿನಂ ಬರ್ದುಕಿದೊಡೆ, ನಾಂ ಉಳಿಸಿಕೊಳಲಕ್ಕುಂ ಅವನನ್, ರುದ್ರಪ್ರಸಾದದಿನ್" ಎಂದು ಎಚ್ಚರಿಸಿದನು.

ಆದರೆ ಅಶ್ವತ್ಥಾಮನೋ, ರುದ್ರನ ಮಾಯೆ ತಿಳಿದ ಬಳಿಕ, ತಾನು ನಡಸಿದ ಅಕೃತ್ಯದ ಅರಿವಾದಾಗ, "ದೈವಂ ತಪ್ಪಾಗಿ ನಡಸುವೊಡೆ ಕಲಿ ಎಡಪುವನ್, ಪೇಡಿ ಬರ್ದುಕುವನ್, ನಗುವನ್" ಎಂದು ತಿಳಿದು; "ಈಗಳ್ ಏನ್ ಗೆಯ್ವೆನ್? ಕಂಡಂತೆ ದೇವರ್ಕಳ್ ಒಲ್ಲದನ್, ಬೀರರ್ ನಗುವ ಪಾಡಾದವನ್, ಈ ಎಲ್ಲಮಂ ಪೊರುವ ತಾಯ್ ಮುಟ್ಟಿ ಮುನಿವನ್" ಎಂದು ತನ್ನ ಇರವಿಗೆ ತಾನೇ ಹೇಸಿ; ಕಡೆಗೆ "ತಕ್ಕನ್ ತಕ್ಕವೊಲ್ ಬಾಳ್ದಪನ್, ತಕ್ಕವೊಲ್ ಸತ್ತಪನ್" ಎಂದು ನಿಶ್ಚಯಿಸಿ, "ಈ ಕ್ಷೇತ್ರದೊಳ್ ಮೆರೆವ ತೀರ್ಥದೊಳ್ ಮುಳುಗಿ, ತೊಳೆದು ಅಂಟಿದೀ ಕರೆಯನ್, ಎನ್ನ ಉಗ್ರದೇವತೆಯ ಕೋಪಮನ್ ಕಳೆವೆನ್" ಎಂದು, ಆ ಶತ್ರುಮಿತ್ರನಾದ ಅಭಿಮನ್ಯು ತನಗೆ ಸಮಯುದ್ಧದಲ್ಲಿ ಮೆಚ್ಚುಗೊಟ್ಟ ಕೊಡಗೆಯಾದ ಇರ್ಬಾಯ ಖಡ್ಗದ ಮೇಲೆ ಬಿದ್ದು, ಭಾರತದ ಸಂದ ಸಿಂಹಗಳ ಜೊತೆಗೆ ಹೋಗುತ್ತಾನೆ.

ಮುಂದೆ, ಅಶ್ವತ್ಥಾಮನ ಶವಸಂಸ್ಕಾರಕ್ಕಾಗಿ ಏಕಲವ್ಯನೂ ಅದು ಆಗದಂತೆ ತಡೆಯುವುದಕ್ಕಾಗಿ ಆ ಭೀಮನೂ ಎದುರೆದುರಿಗೆ ನಿಂತಾಗ, ಕೃಷ್ಣನು ಮಧ್ಯೆಬಂದು, "ಹೃದಯಮನ್ ಕಲ್ಮಾಡಿ, ತಡೆಯದಿರು ಸತ್ತಂಗೆ ನಡೆವ ಸಂಸ್ಕಾರಮನ್. ದ್ವೇಷಂ ಎನಿತು ಇರ್ದೊಡಂ, ತುಳಿಯದಿರು ಧರ್ಮಮನ್" ಎಂದು ಭೀಮನನ್ನು ನಿವಾರಿಸಿದಾಗ; "ಇಂತಾಗೆ ಜಯ ಮೆಲ್ಲಿ ನಮಗೆ?" ಎಂದು ಭೀಮನು ಪೇಚಾಡಿದುದಕ್ಕೆ ಪ್ರತಿಯಾಗಿ

"ಕೆಳೆಯಂಗೆ ಸೋಲ್ವುದೆ ಜಯಂ, ಕ್ಷಮೆಯೆ ತಾನ್ ಜಯಂ. ಕ್ರೋಧಮನ್ ತುಳಿದಿಟ್ಟು, ಬಲ್ವಿಡಿದು ಧರ್ಮಮನ್, ಬಗೆಯೊಡನೆ ಪೋರಾಡುವುದೆ ಜಯಂ. . . ಓ ಮಿತ್ರ, ನಾನುಂ ಇಂತಾಗೆನೇ ಒಂದು ದಿನಂ!" ಎಂದು ಅಶ್ವತ್ಥಾಮನ ಉತ್ತರಕ್ರಿಯಾದಿಗಳಿಗೆ ಅನುವು ಮಾಡಿಕೊಡುತ್ತಾನೆ.

ಈ ನಾಟಕದಲ್ಲಿ ಕೂಡ **'ಏನ್ ಪಿರಿದು ದೈವಬಲಂ'** ಎಂಬ ಭಾವನೆಯೂ ಅದಕ್ಕೆ ಅನುವರ್ತಿಯಾಗಿರಬೇಕಾದ ಪುರುಷಕಾರದ ರೀತಿಯೂ ಉಚಿತವಾದ ಇತರ ಕಾವ್ಯಾಂಗಗಳಿಂದ ಕೂಡಿ ಪ್ರತಿಪಾದಿತವಾಗಿದೆ. 'ಶ್ರೀರಾಮಪರೀಕ್ಷಣ'ದಲ್ಲಿ ಬಂದ 'ಆರೆತ್ತಲೆಸೆದ ಕಲ್ಲಾರ ತಲೆಯೊಡೆಯುವುದೊ' ಎಂಬ ಭಾವನೆ ಇಲ್ಲಿಯೂ ಇದೆ. ಅಶ್ವತ್ಥಾಮನ ಆತ್ಮಹತ್ಯವೇ ಕಡೆಯ ಕುಣಿಕೆಯಾದ ಈ ಭಾರತದ ಸರಪಣಿ ಎಲ್ಲಿಂದ ಮೊದಲಾಯಿತು ನೋಡಿ:

"ಏಗಳಿಗೆ ಪುಟ್ಟಿದಳೊ ಅಗ್ನಿಯೊಳ್ ನಾರಿ,
ಕೃಷ್ಣೆ ಅವಳ್, ಆ ಚಂಡಿ, ಕೌರವರ ಮಾರಿ!
ಭಾರತದ ಸುಖದ ಕುಡಿ ಸುಟ್ಟು ಕರಿಕಾಯ್ತು!
ಆ ಬೆಂಕೆ ದ್ರೌಪದಿಗೆ ತನಗೆ ಸುಖವಾಯ್ತು!
ಜಾರಿದೊಡೆ ಕೌರವನ್ ತೊಳ್ತಿರೊಳ್ ನಕ್ಕಳ್—
ಆ ಗಳಿಗೆ ದುಃಖಮನ್ ಪೊಕ್ಕಳ್—
ನಕ್ಕವಳನ್ ಎಳೆತರಿಸಿ, ಕಿಳ್ತು ಸಿರಿಮುಡಿಯನ್,
ಉರಿವೆಣ್ಣ ಮುಡಿಯನ್,
ತೊಳ್ತೆ, ಬಾ, ಏರೆಂದು ತೋರಿದನ್ ತೊಡೆಯನ್;
ಆ ತೊಡೆಯನೆಲೆ ಭೀಮ, ತೋರಿದಾ ತೊಡೆಯನ್
ಮುರಿದೆ ನೀನ್, ನುಡಿದಂತೆ ಮುರಿದೆ ನೀನ್ ತೊಡೆಯನ್—
ಒದೆದೆ ಪೊನ್ ಮುಡಿಯನ್,
ಒದೆದೆ ಕೌರವನ ಸಿರಿಮುಡಿಯನ್.
ಮುರಿದೊದೆದು, ಪುಡಿಯೊಳಗೆ ಪೊರಳ್ವ ನರಳ್ವ ಒಡೆಯನನ್
ಪೊರೆದಾಳ್ದ ಕಡುನಲ್ಮೆಯೊಡೆಯನನ್
ಕಂಡು, ಕ್ರೋಧಂ ಪೊತ್ತಿ, ಕಿಡಿಯಾದನೀತನ್.
ಮರುಳ್ಗೊಂಡು ಕೊಲೆಗೆಯ್ದುಸೀತನ್.
ಪೇಸುತ್ತೆ ತನ್ನನೇ ಕೊಲೆಗೆಯ್ದುಸೀತನ್.

ಕರ್ಮಂ ಈಪರಿ ಮರಿಗೆ ಮರಿ ಇಕ್ಕುತಿರ್ಕ್ಕುಂ
ಕ್ಷಮೆಯಿಂದೆ ಸಮೆಯದಿರೆ ಮರುಕೊಳಿಸುತಿರ್ಕ್ಕುಂ."

ಈ ಕ್ಷಮೆ ಎಂಬ ಹಿರಿಯಗುಣವಿಲ್ಲದ್ದರಿಂದಲೇ "ಪಿಳ್ಳೆ ಪೆಸರ್ ಇಲ್ಲಾಯ್ತು ಕೌರವಕುಲಶ್ರೀ."

೪

ನಮ್ಮಲ್ಲಿ "ಪಾಪಂ ಇದು, ಪುಣ್ಯಂ ಇದು; ಹಿತರೂಪಂ ಇದು, ಅಹಿತಪ್ರಕಾರಂ ಇದು; ಸುಖಂ ಇದು, ದುಃಖೋಪಾತ್ತಂ ಇದು—ಎಂದು ಅರಿಪುಗುಂ ಆ ಪರಮಕವಿಪ್ರಧಾನರಾ ಕಾವ್ಯಂಗಳ್" ಎಂಬುದು ಹಿಂದಿನ ಕಾಲದಿಂದ ಬಂದ ಕಾವ್ಯತತ್ತ್ವ. ಈ ಎರಡೂ ಕೃತಿಗಳು ಕಾವ್ಯದ ಈ ಮುಖ್ಯೋದ್ದೇಶವನ್ನು ಮರೆಯದೆ, ಆದರೂ ಅದನ್ನು ಮುಂದೆ ದೂಡದೆ, ಕಾವ್ಯಚ್ಛಲದಿಂದ ಅದನ್ನು ಮುಚ್ಚಿ, ಕೊಂಡ ವಸ್ತುವನ್ನು ಆ ಉದ್ದೇಶಕ್ಕೆ ಪೋಷಕವಾಗಿ ರಚಿಸಿಕೊಂಡು, ಈ ಉದ್ಯಮದಲ್ಲಿ ಕಡ ತೆಗೆದ ಮೂಲಪುರಾಣ ವಸ್ತುವಿಗೆ ಅಪಚಾರವಾಗದಂತೆ, ವಿಷಯವೆಷ್ಟು ಘನವೋ ವಿವರಣೆ ಅಷ್ಟೇ ಸ್ಫುಟವಾಗಿ, ಮಾತು ಎಷ್ಟು ಭಾವಗರ್ಭಿತವೋ ಬಂಧ ಅಷ್ಟೇ ಬಿಗಿಯಾಗಿ, ಅರ್ಥ ಎಷ್ಟು ಅರ್ಹವೋ ಅಷ್ಟೇ ಅಸಂದಿಗ್ಧ ವಾಗಿ, ಇಟ್ಟ ಒಂದೊಂದು ವರ್ಣವೂ ರಸೋತ್ಕರ್ಷಕ್ಕೆ ಸಹಾಯಕವಾಗಿ ಎಲ್ಲಾ ದೃಷ್ಟಿಗಳಿಂದಲೂ ತೃಪ್ತಿಯನ್ನು ಕೊಡತಕ್ಕ ಕೃತಿಗಳು.

ನಾನು ಇಲ್ಲಿ ಇದುವರೆಗೂ ಪ್ರಸ್ತಾಪಿಸಿರುವುದು ಕೇವಲ ಕೃತಿಯ ವಸ್ತುವನ್ನು, ವಿಧಾನವನ್ನಲ್ಲ. ಏಕೆಂದರೆ, ನಮ್ಮ ಕನ್ನಡ ಕವಿ ನಾಗ ಚಂದ್ರ ಹೇಳಿರುವ ಹಾಗೆ "ಕಾಳಾಯಸದಿಂ ವಿನಿರ್ಮಿಸಿದ ಕಂಠಿಕೆ ಕಾಂಚನಮಾಲೆಯಂತೆ ಉಪಾದೇಯಂ ಎನಿಕ್ಕುಮೆ? ವಿಷಯಂ ಒಪ್ಪ ದೊಡೆ ಆವುದುಂ ಒಪ್ಪಲ್ ಆರ್ಕುಮೆ?" ಕೊರಳ ಸರದ ಕೆಲಸ ಎಷ್ಟೇ ಕುಶಲವಾಗಿದ್ದರೂ ಅದು ಕಬ್ಬಿಣದ್ದಾದರೆ ಯಾರಿಗೂ ಬೇಡವಾಗುತ್ತದೆ, ಚಿನ್ನದ್ದಾದರೆ ಎಲ್ಲರಿಗೂ ಇಷ್ಟವಾಗುತ್ತದೆ. ಭಾರತಕ್ಕೆ ಎರಡು ಕಣ್ಣು ಗಳಂತಿರುವ, ಶ್ವಾಸೋಚ್ಛ್ವಾಸಗಳಂತಿರುವ, ರಾಮಾಯಣ ಮಹಾ ಭಾರತಗಳ ತಿರುಳನ್ನು ಒಳಗೊಂಡ ಈ ಎರಡು ಕೃತಿಗಳೂ ಚಿನ್ನದಿಂದ ಮಾಡಿದ ಕಂಠಮಾಲಿಕೆ.

# ಖಾದೀ ಕಾಷಾಯ

## ಸಂಯಮವಿಲ್ಲದವನಾಗಿ ರಾಷ್ಟ್ರಪಿಂಡವನ್ನು ತಿನ್ನುವುದಕ್ಕಿಂತ ಕೆಂಪಗೆ ಕಾದು ಅಗ್ನಿಯನ್ನು ಉಗುಳುತ್ತಿರುವ ಕಬ್ಬಿಣದ ಗುಂಡನ್ನು ನುಂಗುವುದು ಮೇಲು

—ಧರ್ಮಪದ—

ಕಾವಿ ಎಂಬುದು ಇಟ್ಟಿಗೆಬಣ್ಣದ ಬಟ್ಟೆ. ಕಾಷಾಯ ಎಂಬುದು ಕಾವಿ ಎಂಬುದಕ್ಕೆ ಇನ್ನೊಂದು ಹೆಸರು. ವಿಷಯಗಳ ಮೇಲಿನ ಆಸಕ್ತಿಯನ್ನು ಬಿಟ್ಟು, ಕೆಟ್ಟುದನ್ನು ಸಂನ್ಯಾಸಮಾಡಿದವರು ಈ ಕಾವಿಯ ಬಟ್ಟೆಯನ್ನು ಧರಿಸುತ್ತಾರಂತೆ.

ಖಾದಿ ಎಂಬುದು ಅಚ್ಚಬಿಳಿಯ ಬಣ್ಣದ ಕೈನೂಲಿನ ಬಟ್ಟೆ. ಶುದ್ಧವಾದ ಸ್ವಭಾವವನ್ನು ಒಳಗೆ ಬೆಳಸುವವರು ಮೇಲುಗಡೆ ಈ ಖಾದಿಯನ್ನು ಧರಿಸಬೇಕೆಂದು ಮೊದಲಾಯಿತಂತೆ.

ಆದರೆ, ಮನಸ್ಸಿನ ಒಳಗೆ ಕಷಾಯ ತುಂಬಿಕೊಂಡಿರುವವರೆಗೂ ಹೊರಗಡೆ ಮೈಮೇಲೆ ಕಾವಿ ಹಾಕಿಕೊಂಡಿದ್ದರೂ ಒಂದೇ, ಖಾದಿ ಹಾಕಿಕೊಂಡಿದ್ದರೂ ಒಂದೇ.

* * * * *

ಹಿಂದೆ ನಮ್ಮಲ್ಲಿ ಬುದ್ಧ ಎಂಬ ಮಹಾತ್ಮ ಇದ್ದನಲ್ಲಾ, ಆತನಿಗೆ ಮಹಾಕಾಶ್ಯಪನೆಂಬ ಒಬ್ಬ ಆಪ್ತ ಶಿಷ್ಯನಿದ್ದನು. ಒಂದು ಸಲ, ಆ ಮಹಾಕಾಶ್ಯಪನು ತನ್ನ ಹಾಗೆಯೇ ಸಂನ್ಯಾಸಿಯ ವಸ್ತ್ರಗಳನ್ನು ಧರಿಸಿದ್ದ ಸುಭದ್ರ ಎಂಬವನನ್ನು ಕಂಡು, "ಭೋ! ನಿನ್ನ ಬಟ್ಟೆಗಳನ್ನು ನೋಡಿದರೆ, ನೀನು ಬುದ್ಧನ ಅನುಯಾಯಿ ಇದ್ದ ಹಾಗಿದೆ. ಭಗವಂತನಾದ ಬುದ್ಧನು ಈಗ ಎಲ್ಲಿರುವನು, ತಿಳಿಸುವೆಯಾ?" ಎಂದು ಕೇಳಿದನು.

ಆದಕ್ಕೆ ಸುಭದ್ರನು, ಗಾಂಧೀಮರಣದ ಸಮಯದಲ್ಲಿ ಅರಿಯದ ಮಕ್ಕಳಿಗೆ ಸಕ್ಕರೆ ಹಂಚಿದವರ ಹಾಗೆ, ಸಂಭ್ರಮಿಸುತ್ತ, "ಓ! ಆ ಗೌತಮನೆಂಬ ದುಷ್ಟ ಶ್ರಮಣನು ಸತ್ತು ಇಂದಿಗೆ ಏಳು ದಿನಗಳಾದುವು. ಸದ್ಯಃ ಅವನು ಸತ್ತನೋ, ನಾವು ಬದುಕಿದೆವು. ಆ ದುಷ್ಟ ಶ್ರಮಣನು

ಬದುಕಿರುವವರೆಗೂ ಹೆಜ್ಜೆಹೆಜ್ಜೆಗೂ ನಮಗೆ 'ಇದು ಮಾಡತಕ್ಕದ್ದು, ಇದು ಮಾಡಬಾರದು; ಇದು ಮಾಡಬಾರದು, ಇದು ಮಾಡತಕ್ಕದ್ದು' ಎಂದು ಒಂದೇ ಸಮನೆ ಹೇಳುತ್ತಿದ್ದನು. ಈಗ ಅವನು ಸತ್ತನೋ--ನಮಗೆ ಇಷ್ಟಬಂದದ್ದನ್ನು ಮಾಡಬಹುದು, ಇಷ್ಟವಾಗದ್ದನ್ನು ಬಿಡಬಹುದು" ಎಂದು ಹಿಗ್ಗಿನಿಂದ ಹೇಳಿದನು.

ಮಹಾಕಾಶ್ಯಪನು ಆ ಮಾತುಗಳನ್ನು ಕೇಳಿ, ಮನಸ್ಸಿನಲ್ಲಿಯೇ ಸಂಕಟಪಟ್ಟು, "ಹಾಗಾದರೆ, ನಿನ್ನಂಥವನು ಈ ಬುದ್ಧನ ಧರ್ಮಕ್ಕೆ ಶರಣಾಗಿ, ಸಂಘಕ್ಕೆ ಸೇರಿ, ಕಾಷಾಯವನ್ನು ಏಕೆ ಧರಿಸಿದೆ?" ಎಂದನು.

ಅದಕ್ಕೆ ಆ ಸುಭದ್ರನು ಏನೂ ಲಜ್ಜೆಪಡದೆ, "ಕಾಷಾಯವನ್ನು ಧರಿಸಿದರೆ ಭಿಕ್ಷಾಪಾತ್ರೆ ಅನಾಯಾಸವಾಗಿ ತುಂಬುವುದೆಂದು ಬಂದೆನಲ್ಲದೆ, ಈ ನೀತಿಗಳೂ ಭೀತಿಗಳೂ ಈ ಶೀಲಗಳೂ ಶೂಲಗಳೂ ಯಾರಿಗೆ ಬೇಕು?" ಎಂದನು.

"ಇಂತಹ ದುಷ್ಟಭಾವನೆಯನ್ನು ಕುಡಿಯಲ್ಲಿಯೇ ಚಿವುಟದಿದ್ದರೆ, ಬೆಳೆದು ಬಲಿತುಕೊಂಡ ಮಾಧವೀಲತೆಯು ತನಗೆ ಆಶ್ರಯಕೊಟ್ಟ ಅಶೋಕವೃಕ್ಷವನ್ನೇ ಹಿಡಿದೆಳೆದು ಕೆಡವಿಬಿಡುವ ಹಾಗೆ, ಬುದ್ಧನ ಧರ್ಮವೂ ಸಂಘವೂ ಶೀಘ್ರದಲ್ಲಿಯೇ ನಶಿಸಿಹೋಗುವುವು" ಎಂದು ಮಹಾಕಾಶ್ಯಪನು ಕ್ಷಿಪ್ರದಲ್ಲಿಯೇ ಒಂದು ಧರ್ಮಸಭೆಯನ್ನು ನಡಸಿದನು.

ಆ ಸಭೆಯಲ್ಲಿ ಧರ್ಮದ ಆಕಾರಗಳನ್ನೂ ಆಚಾರಗಳನ್ನೂ ನಿಷ್ಕರ್ಷಿಸಿಕೊಂಡು, ಸಂಘವನ್ನು ಶುದ್ಧಿಮಾಡಿದುದರ ಪರಿಣಾಮವಾಗಿ, ಬುದ್ಧನ ಧರ್ಮವು ಸುಮಾರು ಸಾವಿರ ವರ್ಷಗಳ ಮಟ್ಟಿಗಾದರೂ ಭಾರತದಲ್ಲಿ ತಾಂಡವವಾಡಿತು.

* * * * *

ಬುದ್ಧನಂತಹವರು ಮುಗಿದರು. ಸುಭದ್ರನಂತಹವರು ತಮಗೆ ಸುಗ್ಗಿಯೆನ್ನುತ್ತಿದ್ದಾರೆ. ಮಹಾಕಾಶ್ಯಪನಂತಹವರು ಸಂಘಶುದ್ಧಿ ಆಗಬೇಕು ಎಂದು ಹೆಣಗುತ್ತಿದ್ದಾರೆ. ಆ ಸಂಘಶುದ್ಧಿ ಆಗುವವರೆಗೂ ದೇಶ ಸುಭದ್ರನಂತೆ ಕಾವಿ ಹಾಕಿಕೊಂಡಿದ್ದರೂ ಒಂದೇ, ಖಾದಿ ಹಾಕಿಕೊಂಡಿದ್ದರೂ ಒಂದೇ.

# ಹಿಂದೆ ಉರುಳಿದ ಚಕ್ರ

**ಮುಂದೆ ಉರುಳಬೇಕಾದುದು ಹಿಂದೆ ಹೊರಳದಿರಲಿ.**

ಎರಡೂವರೆ ಸಾವಿರ ವರ್ಷಗಳ ಹಿಂದಿನ ಕಥೆ. ಕಥೆಯಲ್ಲ, ನಡೆದದ್ದು. ನಡೆದದ್ದು ಎಂದರೆ, 'ಮಹಾಪರಿನಿರ್ವಾಣಸೂತ್ರ' ಎಂಬ ಧರ್ಮಗ್ರಂಥದಲ್ಲಿ ಹೀಗೆ ಹೇಳಿದ್ದಾರೆ:

"ವೈರವನ್ನು ಬಿಡಬೇಕು. ಹಿಂಸೆಯನ್ನು ಹಿಡಿಯಬಾರದು. ಪ್ರೇಮವನ್ನು ಬೆಳೆಸಬೇಕು. ಅಹಿಂಸೆಯಿಂದಲೇ ಬದುಕಬೇಕು" ಎಂದು ನಲವತ್ತೈದು ವರುಷ ಕಾಲ ಬದುಕಿ, ಇತರರಿಗೆ ಆ ಬದುಕಿನ ಮಾರ್ಗವನ್ನು ತೋರಿಸಿದ ಭಗವಂತನಾದ ಬುದ್ಧನು ಕುಶೀನಾರ ಎಂಬ ಸ್ಥಳದಲ್ಲಿ ತನ್ನ ದೇಹವನ್ನು ನೀಗಿದನು.

ಒಂದು ವಾರದ ಕಾಲ ಆ ದೇಹಕ್ಕೆ ಸಕಲರಾಜಯೋಗ್ಯವಾದ ದೇವಯೋಗ್ಯವಾದ ಪೂಜೆಪುರಸ್ಕಾರಗಳನ್ನು ಸಲ್ಲಿಸಿಯಾದ ಮೇಲೆ ಆ ದೇಹವನ್ನು ಅಗ್ನಿಗೆ ಅರ್ಪಿಸಿದರು.

ಭಗವಂತನ ದೇಹವು ಒಂದು ಹಿಡಿ ಬೂದಿಯಾಗಿ, ಒಂದು ರಾಶಿ ಚಂದನದ ಬೂದಿಯೊಡನೆ ಸೇರಿಹೋಯಿತು.

ಕುಶೀನಾರದವರು 'ಭಗವಂತನ ಬೂದಿಯನ್ನು ಪಡೆಯುವ ಭಾಗ್ಯ ನಮ್ಮದಾಯಿತು' ಎಂದು ಇದ್ದುದರಲ್ಲಿ ತೃಪ್ತರಾದರು.

ಅಷ್ಟು ಹೊತ್ತಿಗೆ ಮಗಧದ ರಾಜನಾದ ಅಜಾತಶತ್ರು, ವೈಶಾಲಿಯ ಲಿಚ್ಛವಿಗಳು, ಕಪಿಲವಸ್ತುವಿನ ಶಾಕ್ಯರು, ಆದ್ರ್ಯಕಲ್ಪದ ಬೂಲಿಯರು, ರಾಮಗ್ರಾಮದ ಕೋಲಿಯರು, ಪಾವಾನಗರದ ಮಲ್ಲರು, ಎಲ್ಲರೂ ಬಂದು "ನಮಗೂ ಬುದ್ಧನು ಪರಿಚಿತ ಗುರುವಾದ್ದರಿಂದ ನಮಗೂ ಈ ಬೂದಿಯಲ್ಲಿ ಪಾಲು ಬೇಕು" ಎಂದು ಕೇಳಿದರು. ಕುಶೀನಾರದವರು ಆಗುವುದಿಲ್ಲ ಎಂದರು. ಸರಿ! ಉಳಿದವರೆಲ್ಲರೂ ಯುದ್ಧಮಾಡಿಯಾದರೂ ಬೂದಿಯನ್ನು ಗಳಿಸಲೇಬೇಕು ಎಂದು ಯುದ್ಧಸನ್ನದ್ಧರಾದರು.

ಆಗ ದ್ರೋಣನೆಂಬವನು ಬಂದು, "ಅಯ್ಯಾ! ಶಾಂತಮೂರ್ತಿಯಾಗಿದ್ದವನ ಬೂದಿಗಾಗಿ ಹೀಗೆ ಬಡಿದಾಡುವುದು ಹಾಸ್ಯಾಸ್ಪದ.

ಜಗಳ ಬೇಡ, ಎಲ್ಲರೂ ಹಂಚಿಕೊಳ್ಳೋಣ. ಆ ಬೂದಿಯ ಮೇಲೆ ಎಲ್ಲೆಲ್ಲೂ ಸ್ತೂಪಗಳನ್ನು ಕಟ್ಟಿ ಆರಾಧಿಸೋಣ" ಎಂದನು.

ಅದರಂತೆಯೇ ಆ ಬೂದಿಯನ್ನು ಎಂಟು ಭಾಗವಾಗಿ ಹಂಚಿಕೊಂಡರು. ಹಂಚಿದ ಪಾತ್ರೆಯನ್ನು ದ್ರೋಣನು ತೆಗೆದುಕೊಂಡು ಅದರಮೇಲೆ ತಾನೂ ಒಂದು ಸ್ತೂಪವನ್ನು ಕಟ್ಟಿಸಿದನು. ಕಡೆಗೆ ಬಂದ ಪಿಪ್ಪಲಿವನದ ಮೋರಿಯರು, ಚಿತೆಯನ್ನು ಆರಿಸಿದ ಮೇಲೆ ಉಳಿದಿದ್ದ ಇದ್ದಿಲು ಕರುಕುಗಳನ್ನೇ ಭಕ್ತಿಯಿಂದ ಆರಿಸಿಕೊಂಡು, ಅದರ ಮೇಲೆ ತಾವೂ ಒಂದು ಸ್ತೂಪವನ್ನು ಕಟ್ಟಿದರು.

*  *  *  *  *

ಬುದ್ಧನ ಸ್ತೂಪಗಳಿಗೆ ಬಾಗಿ ನಮಸ್ಕರಿಸಿ, ಸ್ಥೂಲದೇಹಿಗಳೂ ಶ್ರಮವಿಲ್ಲದೆ ರಮಿಸಬಹುದು. ಸ್ತೂಪಗಳ ಹತ್ತಿರ ದಿನವೂ ಪೂಜೆ ಪುರಸ್ಕಾರಗಳು ನಡೆಯುತ್ತಲೇ ಇರಬಹುದು. ಆದರೆ ಸ್ತೂಪಗಳ ಬಳಿ ಬುದ್ಧನ ಶೀಲದಂತೆ ನಡೆಯುವವರನ್ನು ಕಾಣುವುದು ಕಷ್ಟ. ದೇಶದಲ್ಲೆಲ್ಲಾ ಸ್ತೂಪಗಳಿವೆ, ನಿಜ. ಒಡೆದು ಮುರಿದು ಬಿದ್ದುಹೋಗುತ್ತಿದ್ದರೂ ಸ್ತೂಪಗಳು ಇದ್ದುವೆನ್ನುವುದಕ್ಕೆ ಚಿಹ್ನೆಗಳಿವೆ, ನಿಜ. ಆದರೆ ಇದೇ ದೇಶದಲ್ಲಿ ಬುದ್ಧನು ಇದ್ದು ಆಳಿಹೋದನು ಎಂಬುದಕ್ಕೆ ಬೇಕಾದ ನರಚಿಹ್ನ, ಆದೇ ಆತನು ಹೇಳಿದ ಶೀಲವನ್ನು ನಡಸುವ ನವುರಾದ ನೇರವಾದ ಮನಸ್ಸು—ಅದು ಮಾತ್ರ ಈಗ ತುಂಬಾ ವಿರಳವಾಗಿದೆ.

ಬುದ್ಧನ ವಂಶಜನಿನ್ನೊಬ್ಬರು ಇದೇ ಈಗ ಮರುಕೊಳಿಸಿ ಮುಳುಗಿದ್ದಾರೆ. ಅದೇ ಹಳೆಯ ಚರಿತ್ರೆ ಮಾತ್ರ ಮತ್ತೆ ಮರುಕೊಳಿಸದಿರಲಿ, ಅವರು ತೋರಿಸಿಹೋದ ಮಾರ್ಗವನ್ನು ಮುಳುಗಿಸದಿರಲಿ.

# ಸ್ವತಂತ್ರಭಾರತದಲ್ಲಿ ವಿನಾಯಕ

## “ಬೆಳೆದರೇ ಬಾಳು ; ಬೆಳೆಯದಿರೆ ಹಾಳು”

ಕೇಳಯ್ಯಾ, ಭಕ್ತ!

ಈ ವರುಷ ನಿಮ್ಮ ಗಾಂಧಿಯವರು ನಮ್ಮ ಶಿವನ ಪಾದಕ್ಕೆ ಬಂದ ವರುಷವಾದುದರಿಂದ ನನಗೆ ನಿಮ್ಮ ಈ ಪೂಜೆ ಊಟ ಉಪಚಾರಗಳಲ್ಲಿ ಅಷ್ಟು ರುಚಿಯಾಗದೆ ಇದ್ದರೂ ಈ ವರುಷದಂತಹ ಪೂಜೆ ಊಟ ಉಪಚಾರಗಳನ್ನು ನಾನು ಕಂಡು ಎಷ್ಟು ವರುಷವಾಗಿತ್ತೋ! ನೂರಾರು ವರ್ಷಗಳ ಕಾಲ ಪರರಿಗೆ ದಾಸರಾಗಿದ್ದ ನಿಮಗೆ ದೈವವಾಗಿರುವ ದೌರ್ಭಾಗ್ಯ ಬಂತಲ್ಲಾ ಎಂದು ಅದೆಷ್ಟು ಕೊರಗುತ್ತಿದ್ದೆನೋ ಅದು ಆ ಪರಮೇಶ್ವರನಿಗೇ ಗೊತ್ತು. ಅಂತೂ ಹೋಗಲಿ; ಆ ಹಳೆಯ ಕೆಟ್ಟ ಕನಸು ಕರಗಿಹೋಗಿ, ಹೊಸದಾಗಿ ಸ್ವತಂತ್ರರಾದ ನಿಮ್ಮ ಪೂಜೆ ಊಟಗಳನ್ನು ಪುನಃ ಪಡೆಯುವ ಹಾಗಾಯಿತಲ್ಲಾ ಎಂದು, ನನಗೆ ನಾನೇ ಈಡುಗಾಯಿ ಒಡೆದುಕೊಳ್ಳಲೇ ಎನ್ನುವಷ್ಟು ಸಂತೋಷ ಸಂಭ್ರಮಗಳಿಂದ ಮೈಮರೆತಿದ್ದೇನೆ. ಆದರೂ ತಕ್ಕಷ್ಟು ಮಟ್ಟಿನ ಎಚ್ಚರವನ್ನು ಕಾಪಾಡಿಕೊಂಡು, ನಿನಗೆ ಒಂದೆರಡು ಅಗತ್ಯವಾದ ವಿಷಯಗಳನ್ನು ಹೇಳಿ ಹೋಗಬೇಕೆಂದು ಬಂದಿದ್ದೇನೆ. ಕೇಳು.

ನಿನ್ನ ಮೇಜಿನ ಮೇಲೆ ಆರು ಲಿವರಿನ ಒಂದು ದಪ್ಪ ಬೀಗ ಇಟ್ಟಿದ್ದೀಯೆ, ಜ್ಞಾಪಕವಿದೆಯೆ? ನೀನು ಅದನ್ನು ಕೊಂಡುಕೊಂಡಾಗ ಬೀಗವೆಂದೇ ಕೊಂಡುಕೊಂಡೆ. ರೂಮಿನ ಒಳಗೆ ನೀನಿರುವಾಗ, ಗಾಳಿಗೆ ಕಾಗದ ಹಾರದ ಹಾಗೆ ಅದನ್ನು ಪೇಪರ್‌ವೆಯ್ಟಾಗಿ ಬಳಸುತ್ತಿಲ್ಲವೆ? ಒಂದು ಸಲ ಅದರಿಂದ ಕಲ್ಲುಸಕ್ಕರೆ ಪುಡಿಮಾಡಲಿಲ್ಲಾ? ಇನ್ನೊಂದು ಸಲ ಅದರಿಂದ ಗೋಡೆಗೆ ಮೊಳೆ ಹೊಡೆಯಲಿಲ್ಲಾ? ಮತ್ತೊಂದು ಸಲ ಅಳುವ ಮಗುವನ್ನು ಸಂತೈಸುವುದಕ್ಕಾಗಿ ಆ ಬೀಗದ ಎಸಳನ್ನು ಪೀಪಿಯ ಹಾಗೆ ಊದಲಿಲ್ಲಾ?

ಇದು ಏಕೆ ಹೇಳುವೆನೆಂದರೆ—ಯಾವ ಪದಾರ್ಥವಾದರೂ ಸೃಷ್ಟಿಯಾಗುವುದು ಒಂದು ಉದ್ದೇಶಕ್ಕಾಗಿ; ಆದರೆ ಅದು ಬಳಕೆಗೆ ಬರು

ವುದು, ಆಯಾ ಕಾಲದ ಅವಶ್ಯಕತೆಗಳಿಗೆ ಅನುಸಾರವಾದ ಉದ್ದೇಶಗಳಿಗಾಗಿ. ಅದರ ಹಾಗೆಯೇ, **ಗಣೇಶ**ನೆನ್ನಿಸಿದ ಈ ನನ್ನ ಸೃಷ್ಟಿ ಮೂಲತಃ ಯಾವ ಉದ್ದೇಶಕ್ಕಾಗಿ ಆಯಿತೋ ಅದು ನಿಮ್ಮಲ್ಲಿ ಯಾರಿಗೂ ಸರಿಯಾಗಿ ತಿಳಿಯದು. ಒಬ್ಬೊಬ್ಬರು ಒಂದೊಂದು ನಿಮ್ಮನಿಮ್ಮ ಮೂಗು ನೇರಕ್ಕೆ ಹೇಳುತ್ತಿದ್ದೀರಿ. ಹೇಳಿ ಹೇಳಿ, ಏನೂ ನಷ್ಟವಿಲ್ಲ. ಆದರೆ ಈಗ, ಸ್ವತಂತ್ರರಾಗಿರುವ ನಿಮಗೆ ನನ್ನಿಂದ ಏನಾಗಬಹುದು, ಏನಾಗಬೇಕು ಎಂಬುದನ್ನು ನಾನೂ ನನ್ನ ಮೂಗಿನ ನೇರಕ್ಕೆ—ನಾನು **ವಕ್ರತುಂಡ**ನಾದರೂ—ಹೇಳುತ್ತೇನೆ, ಕೇಳು.

ನನಗೆ ಮುಖ್ಯವಾದ ಲಕ್ಷಣ ಏನಯ್ಯ? ನೀನು ಹೇಳಬಹುದು, ನನ್ನ **ಆನೆತಲೆ** ಎಂದು. ಆದರೆ ನಾನು ಹೇಳುತ್ತೇನೆ, ನನ್ನ ಈ **ದೊಡ್ಡ ಹೊಟ್ಟೆ** ಎಂದು. **ಗಜವದನ** ಎಂಬುದಕ್ಕಿಂತ **ಲಂಬೋದರ** ಎಂಬುದೇ ನನಗೆ ತುಂಬ ಪ್ರೀತಿಯ ಹೆಸರು. ಎಷ್ಟು ಗುಂಡಗೆ, ಗಟ್ಟಿಯಾಗಿ, ಬಿರಿದುಹೋಗುವ ಹಾಗೆ, ಊದಿ ಉಬ್ಬಿಕೊಂಡಿದೆ ನೋಡು, ಈ ಹೊಟ್ಟೆ! ಇದೀಗ ಸರ್ವಸಮೃದ್ಧವಾಗಿ ಅನ್ನದಿಂದ ತುಂಬಿದ ಕಣಜ.

ಅನ್ನ ಎಂದರೆ ನೀನು ದಿನವೂ ತಿನ್ನುವ ಪಕ್ವಮಾಡಿದ ಅಕ್ಕಿ ಅಷ್ಟೇ ಎಂದುಕೊಳ್ಳಬೇಡ. ನನ್ನ ಈ ಕೈಯಲ್ಲಿ ನೋಡು, ಏನಿದೆ? ಪಾತ್ರೆ. ಅದರೊಳಗೆ ಏನಿದೆ? ನೀನು ಕಾಯಿಕಡುಬು ಎನ್ನುತ್ತೀಯೆ. ಅಲ್ಲ. ಅದು **ಮೋದಕ**. ನಿನಗೆ ಬೆಳಗ್ಗೆ ಆರು ಗಂಟೆಗೆ ಕಾಫಿ ಮೋದಕ, ಏಳು ಗಂಟೆಗೆ ಉಪ್ಪಿಟ್ಟು ಮೋದಕ, ಹನ್ನೆರಡು ಗಂಟೆಗೆ ಅನ್ನ ಪಲ್ಯ ಹುಳಿ ಇವು ಮೋದಕ, ಮಧ್ಯಾಹ್ನದ ಬಿಸಿಲಿಗೆ ತಂಪಾದ ನೀರು ಮಜ್ಜಿಗೆ ಮೋದಕ, ರಾತ್ರಿ ಊಟವಾದ ಮೇಲೆ ಹುರಿಗಾಳು ಮೋದಕ. ಆದ್ದರಿಂದ, ನಾನು ತಿನ್ನುವುದು ಬರಿಯ ಕಾಯಿಕಡುಬಿನ ಮೋದಕವಲ್ಲ; ನನಗೆ ಇಷ್ಟರಾದ ನಿಮಗೆ ಯಾವುಯಾವುದು ಮೋದವನ್ನು ಕೊಡುತ್ತದೋ ಅದು ಎಲ್ಲವೂ ನನಗೆ ಮೋದಕ.

ಇಂತಹ ಅನೇಕ ಮೋದಕಗಳನ್ನು ಒಳಗಡೆ ತುಂಬಿಕೊಂಡು ಹೊಟ್ಟೆಯ ಕಣಜ ಬಿರಿಯಬಂದಿದೆ ಎಂಬುದನ್ನು ಹೊರಗೆ ಸೂಚಿಸುವುದಕ್ಕಾಗಿಯೇ, ಇದೋ ಇಲ್ಲಿ ಇಲಿ ಕೆಳಗಡೆ ಸುಳಿದಾಡುತ್ತಿದೆ, ನೋಡು.

ರೇಷನ್ನಿನ ರಾಜ್ಯದಲ್ಲಿ ಆಹನ್ಯಹನಿ ನೂಕುತ್ತಿರುವ ಈ ನಿಮ್ಮ ಮನೆಗಳ ಬೆಕ್ಕು, ಪಾಪ, ಇಲಿಯನ್ನು ಕಂಡು ಎಷ್ಟು ಕಾಲವಾಯಿತೋ!

ಹೀಗೆ ಇಲಿ ಓಡಾಡುತ್ತಿದ್ದರೂ ಕಣಜಕ್ಕೆ ಅದರಿಂದ ಏನೂ ಹೆಚ್ಚಿನ ಅಪಾಯವಿಲ್ಲ, ಕಂಡೆಯಾ? ಏಕೆ? ಅಲ್ಲಿ, ಕಣಜದ ಮೇಲೆ, ಅದರ ಸುತ್ತ, ಮುದ್ರೆ ಮಾಡಿದ ಹಾಗೆ, **ಹಾವು** ಬಳಸಿ ಹೆಡೆ ಬಿಚ್ಚಿದೆ, ನೋಡು. 'ಕ್ಷೇತ್ರಪಾಲ' ಎಂದು ಹಾವಿಗೆ ಹೆಸರು. ಹೊಲಗದ್ದೆಗಳಲ್ಲಿ ಪೈರು ಬೆಳೆದು, ತೆನೆ ಬಿಡುತ್ತದೆ. ಅದನ್ನು ತಿನ್ನಲು ಇಲಿ ಬರುತ್ತದೆ. ಹೊಲ ಗದ್ದೆ ಕಾಯಲು ಹಾವು ಇಲ್ಲದಿದ್ದರೆ, ಇಲಿಗಳ ಹಾವಳಿಯಿಂದ ಜನರಿಗೆ ಏನೂ ಕಾಳೇ ಉಳಿಯುತ್ತಿರಲಿಲ್ಲ. ಕಣಜವಿದ್ದಲ್ಲಿ ಇಲಿ ಬರಬೇಕು, ಇಲಿಯ ಹಾವಳಿ ಮೀತಿಮೀರದಂತೆ ತಡೆಯಲು ಹಾವೂ ಇರಬೇಕು—ಇದು ಭಗವಂತನ ನಿಯಮನ.

ಆದರೂ ಈ ಹಾವೂ ಇಲಿಯೂ ಇರುವುದನ್ನು ನೋಡು. ಅದರ ಸ್ಥಳದಲ್ಲಿ ಅದು, ಇದರ ಸ್ಥಳದಲ್ಲಿ ಇದು. ಅದರ ಪಾಡಿಗೆ ಅದು, ಇದರ ಪಾಡಿಗೆ ಇದು. ಸಹಜವಾಗಿಯೇ ಇಲಿಗೂ ಹಾವಿಗೂ ವೈರವಲ್ಲವೆ? ಒಂದನ್ನು ಒಂದು ನುಂಗಬೇಕಲ್ಲವೆ? ಆದರೂ ಮೇಲೆ ಅದು ಹೆದರಿಸದೆ, ಕೆಳಗೆ ಇದು ಹೆದರದೆ, ಹೇಗೆ ಎರಡೂ ಅನ್ಯೋನ್ಯವಾಗಿ ಇವೆ ನೋಡು! ಗಣೇಶನ ಉಪಾಸನೆಮಾಡುವ ನೀವು ಕೂಡ ಈ **ಅವೈರ**ವನ್ನು ಅನುಕರಣಮಾಡಿದರೆ, ನಾನು ನಿಜವಾಗಿಯೂ **ಗಣಪತಿ** ಎನ್ನಿಸೇನು!

ಅದಿರಲಿ, ಈ ಕಣಜವನ್ನು ಹೀಗೆ ತುಂಬುವುದಕ್ಕೆ ಬೇಕಾದಷ್ಟು ಮೋದಕಗಳು ಎಲ್ಲಿಂದ ಬರುತ್ತೆ, ಗೊತ್ತೆ? ಆ ಮೋದಕದ ಪಾತ್ರೆಯ ಈಚೆ ಕಡೆಗಿರುವ ಕೈಯಲ್ಲಿ ಏನಿದೆ, ನೋಡು? ನೀನು ಅದನ್ನು **'ಏಕದಂತ'** ಎನ್ನುವೆ. ಹೌದು, ಚಿಕ್ಕಂದಿನಲ್ಲಿ ನಿನಗೆ ಆ ಕಥೆ ಹೇಳಿದರು. ನಾನು ಮನೆಮನೆಗೆ ಹೋಗಿ ತಿರಿದು, ಮುಖಮುಸುಡಿ ಕಾಣದೆ ತಿಂದು, ಹೊಟ್ಟೆ ಬಿರಿದು ಬಿದ್ದಾಗ ಗೊಳ್ಳನೆ ನಕ್ಕ ಚಂದ್ರನನ್ನು ದಂಡಿಸುವುದಕ್ಕಾಗಿ ನಾನೇ ನನ್ನ ಕೊಂಬನ್ನು ಮುರಿದುಕೊಂಡೆನೆಂದಲ್ಲವೆ? ಕತೆ ಚೆನ್ನಾಗಿದೆ, ಮಕ್ಕಳಿಗೆ. ನಿನಗೆ ಮೊಮ್ಮಕ್ಕಳಾದಾಗ, ಇದನ್ನು ಅವರಿಗೆ ಹೇಳು.

ಕೇಳು, ಇದು ಏಕದಂತವಲ್ಲ. ಈ ದೇಶದ ಕಾವ್ಯಗಳಲ್ಲಿ ಆನೆಯ ಕೊಂಬನ್ನು 'ನೇಗಿಲಿನ ಹಾಗಿದೆ' ಎಂದು ವರ್ಣಿಸುವರು, ಗೊತ್ತೆ? ಈ ಇದು, ನನ್ನ ಕೈಲಿರುವುದು 'ಕೊಂಬಿನ ಹಾಗಿರುವ' **ನೇಗಿಲು**, ನೇಗಿಲಿನ ತುದಿ. ಈ ನೇಗಿಲಿನ ಬಲದಿಂದ ಬೆಳೆದ ಮೋದಕವನ್ನು ತುಂಬಿತುಂಬಿಯೇ ನಾನು ಹೀಗೆ ಲಂಬೋದರನಾದುದು, ಇಲಿ ನನ್ನ ಹತ್ತಿರ ಸುಳಿದುದು, ಹಾವನ್ನು ನಾನು ಕರೆದು ಬಿಗಿದುದು.

ಒಂದೊಂದು ಸಲ, ನಾನು ಈ 'ಕೊಂಬಿನ ಹಾಗಿರುವ' ನೇಗಿಲು ತುದಿಯನ್ನು ಬಿಟ್ಟು, **ಕಂಠ**ವೆಂಬ ಮೊನಚಾದ ಬರೆಹದ ಕಡ್ಡಿಯನ್ನು ಹಿಡಿಯುವುದೂ ಉಂಟು. ಅದು ಕೂಡ ಮುರಿದ ಕೊಂಬಿನ ತುದಿಯ ಹಾಗೆಯೇ ಕಾಣುತ್ತದೆ. ಆದರೆ ಅದು ನಿಜವಾಗಿಯೂ ಕಂಠ. ಮಹರ್ಷಿ ವ್ಯಾಸರಿಗೆ ಭಾರತವನ್ನು ಬರೆದುಕೊಡುವಾಗ ನಾನು ಬಳಸಿದ್ದು ಇದೇ ಕಂಠವನ್ನೇ.

ನನ್ನನ್ನು ಆರಾಧನೆ ಮಾಡುವ ನೀವು ಈ ಮುರಿದ ಕೊಂಬಿನ ಕಥೆಯನ್ನು ಮಕ್ಕಳಿಗೆ ಬಿಟ್ಟು, ನಾನು ಎತ್ತಿಕೊಂಡ ನೇಗಿಲ ತುದಿಯನ್ನು ಆಶ್ರಯಿಸಿ ಮೋದಕಗಳ ಸಮೃದ್ಧಿಯನ್ನು ಬೆಳೆಸಬಾರದೆ? ಅದರ ಜೊತೆಗೆ ನಾನು ಹಿಡಿದ ಕಂಠವನ್ನು ಹಿಡಿದು, ದೇಶದ ನಿರಕ್ಷರತೆಯನ್ನು ನೀಗಬಾರದೆ?

ಈ ಬುದ್ಧಿ ಯಾವಾಗ ಬರುತ್ತದೆ, ಗೊತ್ತೇನು? ನಾನು ನನ್ನ ಉಳಿದ ಎರಡು ಕೈಗಳಲ್ಲಿ ಹಿಡಿದಿರುವುದನ್ನು ನೀವೂ ನಿಮ್ಮ ಕೈಗೆ ಎತ್ತಿಕೊಂಡಾಗ.

ನನ್ನ ತಲೆ ನೋಡು. ಇದು ಆನೆಯ ತಲೆ. ಆನೆಯ ದೇಹ ಬಲು ದೊಡ್ಡದಂತೆ. ಆದರೂ ಅದು ತಿನ್ನುವುದು ಬರಿಯ ಸೊಪ್ಪಂತೆ. ಆನೆಯ ಒಂದು ಹೆಜ್ಜೆಗುರುತಿನೊಳಗೆ ಇತರ ಹತ್ತಾರು ಪ್ರಾಣಿಗಳ ಹೆಜ್ಜೆ ಗುರುತುಗಳನ್ನು ಅಡಕಮಾಡಬಹುದು. ಆನೆಯ ಕಣ್ಣು ಬಹಳ ಚುರುಕಂತೆ, ಅದರ ಜ್ಞಾಪಕಶಕ್ತಿ ತುಂಬ ದೀರ್ಘವಂತೆ. ಇದನ್ನೆಲ್ಲಾ ನಂಬಿದರೆ ನಂಬು, ಬಿಟ್ಟರೆ ಬಿಡು. ಅದು ನನಗೆ ಮುಖ್ಯವಲ್ಲ.

ಆನೆಯ ತಲೆಯನ್ನು ಉಳ್ಳ ನನ್ನ ಈ ಕೈಯಲ್ಲಿ ಏನಿದೆ, ನೋಡು. **ಪಾಶ** ಈ ಕಡೆ, **ಅಂಕುಶ** ಆ ಕಡೆ. ಹೌದು : ಪಾಶ, ಅಂಕುಶ. ದುಷ್ಟವಾದ

ದೇಹವನ್ನು ಕಟ್ಟಿ ತಡೆಯುವುದಕ್ಕೆ ಪಾಶ. ದುಷ್ಟವಾದ ಮನಸ್ಸನ್ನು ತಿದ್ದಿ ತಿರುಹುವುದಕ್ಕೆ ಅಂಕುಶ.

ಆದರೆ ಒಂದು ವಿಶೇಷ. ಆನೆಗೆ ಹಾಕುವ ಪಾಶವನ್ನೂ ಆನೆಗೆ ಹಾಕುವ ಅಂಕುಶವನ್ನೂ ಎರಡೂ ಕೈಯಲ್ಲಿ ಹಿಡಿದವನು—ಆನೆಯ ಮುಖದ ಈ ನಾನೇ! ಇದೇ **ಸರ್ವತಂತ್ರ ಸ್ವ**-ತಂತ್ರವಾದ ಸ್ಥಿತಿ! ಈ ಕಾರಣದಿಂದಲೇ ನಾನು **ವಿ–ನಾಯಕ** ಎನ್ನಿಸಿಕೊಂಡಿರುವುದು.

ಎಂದಿಗೆ ನೀವೂ ಹೀಗೆಯೇ ನನ್ನ ಹಾಗೆಯೇ ನಿಮಗೆ ಬೇಕಾದ ಪಾಶಗಳನ್ನೂ ನಿಮಗೆ ಬೇಕಾದ ಅಂಕುಶಗಳನ್ನೂ ನೀವೇ ಧಾರಣೆ ಮಾಡಿಕೊಳ್ಳುವ ಮಟ್ಟಕ್ಕೆ ಬರುವಿರೋ ಅಂದು ಲೋಕದಲ್ಲಿ ನನಗೆ ಅಗ್ರ ಪೂಜೆ ಸಲ್ಲುವ ಹಾಗೆಯೇ ನಿಮಗೂ ಅಗ್ರಪೂಜೆ ಸಲ್ಲುವುದು.

ಹೀಗೆ ಒಂದೊಂದು ಕೈಯಲ್ಲೂ ಪಾಶ, ಅಂಕುಶ, ಮೋದಕ ಪಾತ್ರೆ, ಏಕದಂತವೋ ಮತ್ತೇನೋ ಆಗಿ ನಾಲ್ಕೂ ಕೈ ತುಂಬಿಹೋಗಿದ್ದರೂ 'ಬೆಣ್ಣೆ ಇಟ್ಟುಕೊಂಡು ತುಪ್ಪಕ್ಕೆ ಅತ್ತರು' ಎಂದ ಹಾಗೆ ತಿನ್ನುವುದಕ್ಕಿದ್ದರೂ ಹೊಟ್ಟೆಯೊಣಗಿಸಿಕೊಂಡು ನಾನು ಸುಮ್ಮನೆ ಕುಳಿತಿಲ್ಲ, ನೋಡು. ಸೊಂಡಿಲನ್ನು ಹಾಗೇ ಬಗ್ಗಿಸಿ, ಒಂದೊಂದಾಗಿ ಮೋದಕವನ್ನು ಪಾತ್ರೆಯಿಂದ ಎತ್ತಿ ಹೊಟ್ಟೆಗೆ ವರ್ಗಾಯಿಸುತ್ತಿದ್ದೇನೆ. ನೀನು ಎಷ್ಟು ಸಲ 'ಸವರಣೆ ಸಾಲದು, ಸಲಕರಣೆ ಸಾಲದು' ಎಂದು ಗೊಣಗಾಡಿಲ್ಲ, ಜ್ಞಾಪಿಸಿಕೊ. ಮನಸ್ಸು ಮಾತ್ರ ಒಂದಿದ್ದರೆ, ಮಾರ್ಗ ಒಂದುನೂರು ತಾನಾಗಿಯೇ ತೋರುತ್ತದೆ.

ನೋಡು, ನಾನು ಈ **ಗಣನಾಯಕ** ಪದವಿಗೆ ಒಮ್ಮಿಂದೊಮ್ಮೆಗೇ ಹಾರಿಬರಲಿಲ್ಲ. ಮೊದಮೊದಲು ನಾನು ಒಂದು ಗ್ರಾಮದೇವತೆಯೆನ್ನಿಸಿಕೊಂಡಿದ್ದೆ. ಬರುಬರುತ್ತಾ ಈಗ ಆರ್ಯ ದೇವತೆಗಳಿಗಿಂತ ಮೊದಲು ನನಗೆ ಪೂಜೆ ಸಲ್ಲಿಸುತ್ತಿದ್ದಾರೆ. ಈ ದಿವಸ ಕೂಡ ಕೆಲವು ಕಡೆ ನನ್ನನ್ನು ಹೇಗೆ ಭಾವನೆಮಾಡುತ್ತಾರೆ, ನೋಡು: ಒಂದು ಸಣ್ಣ ಸೆಗಣಿ ಉಂಡೆ ಮಾಡಿ, ಅದರಲ್ಲಿ ಎರಡು ಹಸಿರು ಗರುಕೆ ಸಿಕ್ಕಿಸಿ, ಅದನ್ನು 'ಪಿಳ್ಳಾರಿ' ಎಂದು ಎಲ್ಲಕ್ಕೂ ಮೊದಲು ಪೂಜೆಮಾಡುವುದಿಲ್ಲವೆ! ಅದೇ ನನ್ನ ಮೊತ್ತಮೊದಲಿನ ರೂಪ. ಈಗಿನ ನನ್ನ ಈ ದಿವ್ಯಭೋಗವನ್ನು

ಕಂಡವರು ಇದನ್ನು ನಂಬದಿರಬಹುದು. ಆದರೆ ಇದು ನಿಜ. ನಾನು ಮೊದಲು ಸುಗ್ಗಿಯ ದೇವತೆ ಎಂದು ಹುಟ್ಟಿದವನು. ನೆಲದಲ್ಲಿ ಬಂದ ಹಸುರೆಲ್ಲ ಕಾಡಾನೆಗಳಿಂದಲೂ ಕಾಡುಹಂದಿಗಳಿಂದಲೂ ನಾಶವಾಗಿ ಹೋಗುತ್ತಿದ್ದಾಗ ಆರ್ತರಾದ ಜನಗಳನ್ನು ಸಂತೈಸುವುದಕ್ಕಾಗಿಯೇ ನನ್ನ ಆವಿರ್ಭಾವವಾಯಿತು. ಆದ್ದರಿಂದಲೇ ನನಗೆ ಹಂದಿಗೆ ಹೇಗೋ ಹಾಗೆ, ಆನೆಗೆ ಹೇಗೋ ಹಾಗೆ ಈ ಉದ್ಗಮೂಗು, ಈ ತಿನಾಳಿತನ.

ನ ತ್ವಹಂ ಕಾಮಯೇ ರಾಜ್ಯಂ
ನ ಸ್ವರ್ಗಂ ನಾಽಪುನರ್ಭವಂ
ಕಾಮಯೇ ದುಃಖತಪ್ತಾನಾಂ
ಪ್ರಾಣಿನಾಮಾರ್ತಿನಾಶನಂ

ಎಂದಿರುವರಲ್ಲಾ, ಅದರ ಹಾಗೆ, ನನಗೆ ರಾಜ್ಯದಲ್ಲಿ ಆಸೆಯಿಲ್ಲ, ಸ್ವರ್ಗ ಬೇಡ, ಮುಕ್ತಿ ಬೇಡ ; ದುಃಖದಿಂದ ಸುಟ್ಟುಹೋಗುತ್ತಿರುವ ಪ್ರಾಣಿಗಳ ಸಂಕಟವನ್ನು ನಾಶಮಾಡುವುದೊಂದೇ ನನಗಿರುವ ಆಸೆ. ಈ ಬುದ್ಧಿಯನ್ನು ಶಿವನು ನನಗೆ ಕರುಣಿಸಿಕೊಟ್ಟನು. ಈ ಆರ್ತತ್ರಾಣ ಪರಾಯಣತೆ ನನಗೆ ಬಂದುದರಿಂದಲೇ ನಾನು ಸೆಗಣಿಮುದ್ದೆಯ ಪಿಳ್ಳಾರಿತನದಿಂದ ಈ ವಿಘ್ನೇಶ್ವರನ ಪದವಿಗೂ ಸಿದ್ಧಿವಿನಾಯಕನ ಸ್ಥಾನಕ್ಕೂ ವಿದ್ಯಾಗಣಪತಿಯವಿಭವಕ್ಕೂ ಏರಿಬಂದಿದ್ದೇನೆ—ನಿಮ್ಮ ಗಾಂಧಿ ನೆಹರು ಮುಂತಾದವರು, ವರ್ಷಾನುಗಟ್ಟಲೆ ಸೆರೆಮನೆಯಲ್ಲಿ ನೊರಗುತ್ತಿದ್ದವರು, ಈಗ ಈ ದೇಶದ ಅಧಿನಾಯಕರಾಗಿ, ಹೊರಗಿನ ದೇಶಗಳಲ್ಲಿಯೂ ಅಮೋಘವಾದ ಮಾನ್ಯತೆ ಗೌರವ ಪ್ರೀತಿ ವಿಶ್ವಾಸಗಳನ್ನು ಸಂಪಾದಿಸಿಕೊಂಡಿರುವ ಹಾಗೆ.

ನೋಡು : ನಾನು ಅವತಾರಮಾಡಿದ್ದು ದಕ್ಷಿಣದೇಶದಲ್ಲಿ, ದ್ರಾವಿಡರ ದೇವತೆಯಾಗಿ. ಆರ್ಯರು ಬಂದಾಗ ಅವರು ನನ್ನನ್ನು ಪ್ರೀತಿಯಿಂದ ಎತ್ತಿಕೊಂಡರು. ಕ್ರಮಕ್ರಮವಾಗಿ ಕಂಡಕಂಡವರೆಲ್ಲ ನನ್ನನ್ನು ಕೈಗೆತ್ತಿಕೊಂಡರು—ಬಾಲಕೃಷ್ಣನನ್ನು ಕಂಡವರೋ ಎಂಬ ಹಾಗೆ. ಈಗ ನೋಡು: ಇಂಡಿಯಾ, ನೇಪಾಳ, ಟಿಬೆಟ್, ಬರ್ಮಾ, ಜಾವಾ, ಬೋರ್ನಿಯೊ, ಚೀನಾ, ಜಪಾನ್ ಇಲ್ಲೆಲ್ಲಾ ನನ್ನನ್ನು ಎತ್ತಿಕೊಂಡಿ

ದ್ದಾರೆ. ನಿಜವೇ, ಆಯಾ ದೇಶದಲ್ಲಿ ಅವರವರು ತಮತಮಗೆ ಬೇಕಾದ ಹಾಗೆ ನನಗೆ ಬೇರೆಬೇರೆ ಅಲಂಕಾರಮಾಡಿದ್ದಾರೆ; ಆದರೂ ಒಳಗಡೆ ನಾನು ಅದೇ ಗಣೇಶನೇ, ಅದೇ ಆನೆಮುಖನೇ, ಅದೇ ದೊಡ್ಡ ಹೊಟ್ಟೆಯೇ.* ಹಳೆಯ ಅಮೇರಿಕಾದೇಶದಲ್ಲೂ ನನ್ನ ರೂಪವನ್ನು ಹಿಂದೆ ಮೆಚ್ಚಿಕೊಂಡಿದ್ದರು. ಅದರ ವಿಷಯ ಬೇಕಾದರೆ 'Hindu America'† ಎಂಬ ಪುಸ್ತಕ ನೋಡು.

ಇಂತಹ ಅತಿಶಯವಾದ ಲೋಕಾದರವು ನನಗೆ ಏಕೆ ಪ್ರಾಪ್ತ ವಾಯಿತು, ಹೇಗೆ ಪ್ರಾಪ್ತವಾಯಿತು ಎಂಬುದರ ಬಗೆಗೆ ನನ್ನ ಅಭಿಪ್ರಾಯವನ್ನೂ ಹೇಳುತ್ತೇನೆ, ಕೇಳು.

ನಾನು ಹೇಳಿ ಕೇಳಿ ಅಂತಹ ಸುರೂಪಿಯೇನೂ ಅಲ್ಲ. ದೇವ ಗಣದಲ್ಲಿ ನನಗಿಂತ ಲಕ್ಷಣವಾದವರು ಲಕ್ಷಾಂತರ ಇದ್ದಾರೆ. ನನ್ನ ಈ ದೊಡ್ಡಹೊಟ್ಟೆ, ಈ ಮೋಟುಕೈ, ಮೋಟುಕಾಲು, ಎಲ್ಲಕ್ಕೂ ಮೇಲೆ ಈ ಆನೆಮುಖ! ಆದರೂ ಜನ ನನ್ನನ್ನು ಪ್ರೀತಿಸುವುದು ನನ್ನ ಮಿಣಿ ಮಿಣಿ ಕಣ್ಣುಗಳಿಗಾಗಿ ಎಂದು ನನ್ನ ನಂಬಿಕೆ. ನಾನು ಯಾರನ್ನೂ ಎಂದೂ ದ್ವೇಷಿಸಿದುದಾಗಲಿ, ಯಾರ ಮೇಲೆಯಾದರೂ ಯಾವಾಗ ಲಾದರೂ ಸಿಡುಕಿದುದಾಗಲಿ, ಯಾರಿಗಾದರೂ ಎಲ್ಲಿಯಾದರೂ ಕೇಡೆ ಣಿಸಿದುದಾಗಲಿ ಇಲ್ಲವೆಂದು, ಶಿವನಾಣೆ ಹೇಳಬಲ್ಲೆ. ಆದ್ದರಿಂದಲೇ ಇಂತಹ ಶತವಿಕಾರವಾದ ದೇಹವನ್ನು ನಾನು ಪಡೆದಿದ್ದರೂ ನನ್ನನ್ನು ಕಂಡರೆ ಜನರಿಗೆ ಅಷ್ಟು ಇಷ್ಟ. ಕಣ್ಣುಗಳು ಜೀವವು ಇಣಿಕಿನೋಡುವ ಕಿಟಿಕಿ ಎಂಬ ಮಾತು ತಪ್ಪಲ್ಲ. ನನ್ನ ಅಂತರ್ಯಕ್ಕೆ ನನ್ನ ಕಣ್ಣುಗಳಲ್ಲಿ ತುಳುಕುವ ತಾಳ್ಮೆ ತಣ್ಪುಗಳೇ ಸಾಕ್ಷಿ.

ನನ್ನ ಹಾಗೆಯೇ ನಿಮ್ಮಲ್ಲಿ ಒಬ್ಬರು ಇದ್ದರು, ನೋಡು: ಆ ಗಾಂಧಿ. ಆತನಿಗೂ ನನ್ನ ಹಾಗೆಯೇ ಕಿವಿ. ಆತನೂ ನನ್ನ ಹಾಗೆಯೇ ಸುರೂಪಿಯೆಂದೇನೂ ಹೇಳಿಸಿಕೊಂಡವರಲ್ಲ. ಆದರೂ ಈ ಕಾಲದ

* ಇದರ ವಿಷಯ ಬೇಕಾದರೆ ಈ ಪುಸ್ತಕ ನೋಡು: GANESHA by Alice Getty. Oxford University Press, 1936.

†HINDU AMERICA—Chaman Lal. New Book Co., Bombay, 1948.

ಇಡಿಯ ಜಗತ್ತಿನಲ್ಲಿ ಆತನಂತೆ ಸರ್ವಲೋಕವ್ಯಾಪಿಯಾದವರು ಬೇರೆ ಯಾರು, ಹೇಳು! ಈ ವಿನಾಯಕನಾದ ಮೇಲೆ ಎರಡನೆಯ ವಿನಾಯಕನೆಂದರೆ—ಆತನೇ, ಆ ಗಾಂಧಿ!

ನಾನೂ ಆ ಗಾಂಧಿಯೂ ಇಬ್ಬರೂ ಒಮ್ಮುಖರಾಗಿದ್ದೇವೆ. ಸಮೃದ್ಧಿ, ಸ್ವಾತಂತ್ರ್ಯ, ಸಂಯಮ, ಸಮವಾಯ, ಸಾರಸ್ವತ, ಸರ್ವಸವಿ ಎಂಬಿವೇ ಮೊದಲಾದ ಸಕಲ ಸಸಸಸಗಳಿಗಾಗಿ ಸದಾ ಸಾಧನೆಮಾಡಿ, ಸಿದ್ಧಿಪಡೆದಿದ್ದೇವೆ. ಗಣಪತಿಯಾದ ನನ್ನ ಹೆಸರು ಹೇಳುವ ನೀವು, ಗಾಂಧಿಯಾದ ಅವರ ಹೆಸರು ಹೇಳುವ ನೀವು, ಈ ನಮ್ಮ ಮಾರ್ಗವನ್ನು ಹಿಡಿದು ಬೆಳೆದರೆ, ಬೆಳೆದು ಬಾಳಿದರೆ—ಅದೇ ನಮಗೆ ಇಷ್ಟಾರ್ಥಸಿದ್ಧಿ.

ಆದಕ್ಕಾಗಿಯೇ ಹೇಳಿದ್ದು:

**"ಬೆಳೆದರೇ ಬಾಳು; ಬೆಳೆಯದಿರೆ ಹಾಳು."**

# ಎಂದೂ ಆರದ ಬೆಳಕು

## "ಆರಿತೇ?—ಆರದು ಈ ಬೆಳಕು!"

'The light has gone out of our lives and there is darkness everywhere and I do not quite know what to tell you or how to say it. Our beloved leader, Bapu as we called him, The Father of the Nation, is no more. Perhaps I am wrong to say that. Nevertheless, we will not see him again as we have seen him for these many years. . . .'

ಹೀಗೆಂಬುದಾಗಿ ಪ್ರಧಾನಿ ಪಂಡಿತ ಜವಾಹರಲಾಲ್ ನೆಹರು ಅವರು ಗಾಂಧಿಯವರ ಮರಣದ ಆ ಶುಕ್ರವಾರ ರಾತ್ರೆ ಎ. ಐ. ಆರ್.ಇಂದ ಮಾತನಾಡುವಾಗ ಮೊದಲು ಹೇಳಿದರು.

ಅವರು ಹೇಳಿದ ಆ ಮಾತು, ನಮ್ಮಂತಹವರು ಅನೇಕರ ಪಾಲಿಗೆ ನಿಜವೇ ಎನ್ನುವ ಹಾಗಿತ್ತು. ಬದುಕಿರುವವರೆಗೂ ಗಾಂಧಿಯವರನ್ನು ಹಾಗೂ ಹೀಗೂ ಕಾಣುತ್ತಿದ್ದವರು, ಅವರು ಮರಣವಾದರೆಂಬುದನ್ನು ಕೇಳಿದೊಡನೆಯೆ 'ಎಂತಹ ವಸ್ತುವನ್ನು ಕಳೆದುಕೊಂಡೆವು! ಈಗ ಅವರು ಬಿಟ್ಟುಹೋದ ಶೂನ್ಯದಲ್ಲಿ ಬರಬಲ್ಲವರು ಯಾರು!' ಎಂಬುದಾಗಿ ಬೆಳಕು ಇರುವವರೆಗೂ ಬೆಳಕು ಇದೆಯೆಂಬ ಪರಿಜ್ಞಾನವೇ ಇಲ್ಲದೆ ಆ ಬೆಳಕಿನ ಪ್ರಯೋಜನವನ್ನು ಮಾತ್ರ ಪಡೆಯುತ್ತಿದ್ದು, ಆಗಾಗ ಆ ಬೆಳಕಿನ ಪ್ರಕಾಶ ಸಾಲದೆಂದು ಗೊಣಗುತ್ತಿದ್ದು, ಆ ಬೆಳಕು ಆರಿ ಕತ್ತಲೆ ಕಣ್ಕಿಡಿಸಿದಾಗ ದೀಪದ ಅಭಾವವನ್ನು ಮನಗಾಣುವ ಹಾಗೆ—ಗಾಂಧಿಯವರು ಎಷ್ಟುಮಟ್ಟಿಗೆ ನಮ್ಮ ಜೀವದ ಜೀವವಾಗಿದ್ದರು ಎಂಬುದನ್ನು ಆ ಕೆಲವು ದಿನಗಳ ಕಾಲವಾದರೂ ಅನುಭವಿಸಿದೆವು.

ಆದರೆ ನಿಜವಾಗಿಯೂ ಆಗ ಅನುಭವವಾದ ಕಣ್‌ಕತ್ತಲೆ ದೀಪವು ಆರಿಹೋಗಿ ಆದಂತಹ ಕಾಳಕತ್ತಲೆಯಲ್ಲ; ಅದು, ದೀಪವು ಇದ್ದಕ್ಕಿದ್ದ ಹಾಗೆ ಏಕಾಏಕಿ ಕೋಟಿಸೂರ್ಯಸಮಪ್ರಭೆಯನ್ನು ವ್ಯಾಪಿಸಿದುದರಿಂದ

ಬಂದ ದೇದೀಪ್ಯಮಾನವಾದ ಕತ್ತಲೆ. ಆ ಮಹಾಪ್ರದೀಪದ ಬೆಳಕಿಗೆ ಕಣ್ಣು ರೂಢಿಯಾಗುವ ವರೆಗೂ ಕಣ್ಣಿಗೆ ಕತ್ತಲೆ ಹಾಗೇ ಕಟ್ಟಿರುತ್ತದೆ. ಪಾಟವ ಕಡಿಮೆಯಾದ ಕಣ್ಣುಗಳು ಹೆಚ್ಚು ಹೊತ್ತಾದಮೇಲೆ ಚೇತರಿಸಿ ಕೊಳ್ಳುತ್ತವೆ; ಪಟುವಾದ ಕಣ್ಣುಗಳಾದರೋ ಬಹು ಬೇಗನೆ ಚೇತರಿಸಿ ಕೊಳ್ಳುತ್ತವೆ.

ಪಂಡಿತ ನೆಹರು ಅವರು "ನಮ್ಮೆಲ್ಲರ ಬಾಳುಗಳ ಬೆಳಕು ಆರಿ ಹೋಯಿತು. ಎಲ್ಲಕಡೆಯೂ ಕತ್ತಲೆ ತುಂಬಿದೆ" ಎಂದೇ ಆರಂಭಿಸಿದರು. ಆದರೆ ಮುಂದಿನ ಮಾತಿನಲ್ಲೇ "ಬಹುಶಃ, ನಾನು ಹಾಗೆ ಹೇಳುವುದು ತಪ್ಪು' ಎಂದು ಚೇತರಿಸಿಕೊಂಡರು. ಅನಂತರ ಹೇಳಿದರು:

> The light has gone out, I said and yet I was wrong. For the light that shone in this country was no ordinary light. The light that has illumined this country for these many years will illumine this country for many more years and a thousand years later that light will still be seen in this country and the world will see it and it will give solace to innumerable hearts. For that light represented the living truth and the eternal man was with us with his eternal truth reminding us of the right faith, drawing us from error, taking this ancient country to freedom!

ಇದು ಶೋಕವನ್ನು ಕೊಡವಿಕೊಂಡು ಎದ್ದು ಪ್ರಜ್ಞೆಯಿಂದ ಆಡಿದ ಮಾತು. ಈಗ ತಾನೆ **'ಆರಿತು'** ಎಂದು ಹೇಳಿದ ಬೆಳಕು ಸಾಧಾರಣ ವಾಗಿ ಆರಿಹೋಗುವ ಬೆಳಕಲ್ಲ. ಇದನ್ನು ಕುರಿತು **'ಆರಿತೇ!'** ಎಂದು ದುಃಖಪಡುವುದಕ್ಕಿಂತ **'ಆರೀತೇ!'** ಎಂದು ವಿಸ್ಮಯಗೊಳ್ಳುವುದೂ ಧೈರ್ಯವಾಗಿರುವುದೂ ತಕ್ಕದ್ದು. ಅನೇಕ ಶತಮಾನಗಳ ಹಿಂದೆ ಹೀಗೆಯೇ 'ಆರಿಹೋಯಿತು' ಎಂದು ಅಜ್ಞಾನದಿಂದ ಆಗಿನವರು ಎಂದು ಕೊಂಡ ರಾಮ, ಕೃಷ್ಣ, ಬುದ್ಧ, ಸಾಕ್ರಟೀಸ್, ಝರತುಷ್ಟ್ರ, ಕಾಂಫೂಷ, ಕ್ರಿಸ್ತ, ಮಹಮದ್ ಮೊದಲಾದ ಎಷ್ಟೋ ಬೆಳಕುಗಳು ಈಗಲೂ

ಆಷ್ಟೊಂದು ಶತಮಾನಗಳು ಉರುಳಿಹೋದ ಮೇಲೂ ತಮ್ಮತಮ್ಮ ಕಾಲದೇಶಗಳ ಪರಿಮಿತಿಯನ್ನು ದಾಟಿ ಇಂದಿನವರ ಬದುಕಿನ ಮೇಲೆ ತಮ್ಮ ಪ್ರಭಾವಮುದ್ರೆಯನ್ನು ಒತ್ತುತ್ತಿರುವ ಹಾಗೆಯೇ---ಈ ಬೆಳಕಾದರೂ ಈ ದೇಶವನ್ನೂ ಇದರಂತಹ ದೇಶಗಳನ್ನೂ ಕೈಹಿಡಿದು ನಿಜದ ನೇರಕ್ಕೆ ನಡಸುತ್ತದೆ. ಸತ್ಯವನ್ನು ಹಿಡಿದು, ಸತ್ಯದಿಂದ ಬದುಕಿ, ಸತ್ಯದ ಕಡೆಗೆ ನಡೆದು, ಸತ್ಯಮಯರಾಗಿದ್ದವರು ಸತ್ಯದಂತೆ ಶಾಶ್ವತರಾಗಿ ಸನಾತನರಾಗಿ ಇರುವರು ಎಂಬುದನ್ನು ಲೋಕಚರಿತ್ರೆಯು ಸಾಕ್ಷೀಕರಿಸಿ ಕೊಟ್ಟಿದೆ. ಆದ್ದರಿಂದ, ಒಂದುಕ್ಷಣ ಹಿಂದೆ 'ಆರಿಹೋಯಿತು!' ಎಂದದ್ದನ್ನು 'ಇಲ್ಲ, ಇದು ಆರಲಾರದು!' ಎಂದು ಮರುಕ್ಷಣದಲ್ಲಿ ಆಡಿದ ಮಾತು ಇದು ಶೋಕವನ್ನು ಕೊಡವಿಕೊಂಡು ಎದ್ದು, ಪ್ರಜ್ಞೆಯಿಂದ ಆಡಿದ ಮಾತು.

ಇದೇ ಗಾಂಧೀಮರಣದ ಸಂದರ್ಭದಲ್ಲಿ 'ಕನ್ನಡನುಡಿ' ವಾರಪತ್ರಿಕೆಯು (೬-೨-೪೮) ಯೋಗಶಿಖೋಪನಿಷತ್ತಿನ ಒಂದು ಶ್ಲೋಕವನ್ನು ಉದ್ಧಾರಮಾಡಿತು:

ಘಟಮಧ್ಯೆ ಯಥಾ ದೀಪೋ ಬಾಹ್ಯೇ ನೈವ ಪ್ರಕಾಶತೇ
ಭಿನ್ನೇ ತಸ್ಮಿನ್ ಘಟೇ ಚೈವ ದೀಪ ಜ್ವಾಲಾ ಚ ಭಾಸತೇ

ಒಂದು ಗಡಿಗೆಯ ನಡುವೆ ಒಂದು ದೀಪ. ಹೊರಗಿನಿಂದ ನೋಡಿದರೆ ಆ ದೀಪದ ಬೆಳಕು ಕಾಣುವುದಿಲ್ಲ. ಆದರೆ ಗಡಿಗೆ ಒಡೆದುಹೋದರೆ, ದೀಪ ನಾಲಗೆ ಚಾಚಿ ಬೆಳಗುತ್ತದೆ.

ನಿಜವೇ. ಗಡಿಗೆಯೊಳಗೆ ಎಂತಹ ಪ್ರಕಾಶಮಾನವಾದ ದೀಪವನ್ನಿಟ್ಟರೂ, ದೂರದಿಂದ ನೋಡಿದರೆ ಕಣ್ಣಿಗೆ ಕಾಣುವುದು ಗಡಿಗೆಯೇ. ಎಷ್ಟೆಷ್ಟು ಹತ್ತಿರ ಬಂದರೆ, ಎಷ್ಟೆಷ್ಟು ಕುರಿತು ನೋಡಿದರೆ, ಅಷ್ಟಷ್ಟು ಗಡಿಗೆಯ ಬಾಯಿಯಿಂದ ಬರುವ ಬೆಳಕು ಹೆಚ್ಚು ಕಾಣುತ್ತದೆ. ಗಡಿಗೆಯ ಬಾಯಿಯ ಬಳಿ ಮುಖವಿಟ್ಟು ನೋಡುವುದಾದರೆ, ಬೆಳಕು ಇನ್ನಷ್ಟು ಕಾಣುತ್ತದೆ. ಆದರೂ, ಆ ಬೆಳಕಿನ ಸರ್ವತೋಮುಖವಾದ ಸಂದರ್ಶನವಾಗಬೇಕಾದರೆ, ಆದಕ್ಕೆ ಅಡ್ಡಿಯಾಗಿರುವ ಸುತ್ತಿನ ಗಡಿಗೆ ಹೋಗಲೇಬೇಕು. ಅದು ಹೋದಾಗ, ಬೆಳಕು ತಾನೇ ತಾನಾಗಿ

ಪ್ರಜ್ವಲಿಸುತ್ತದೆ. ಇದು ಆಗುವ ಹಾಗೆ, ಗಡಿಗೆ ತಾನಾಗಿಯೇ ಮುರಿದು ಬಿದ್ದರೂ ಸರಿಯೇ, ಗಡಿಗೆಯನ್ನು ದೈವ ತನ್ನ ಉಪಕರಣದಿಂದ ಮುರಿದು ಹಾಕಿದರೂ ಸರಿಯೇ, ಬೆಳಕಿನ ಆ ಹಠಾತ್‌ಪ್ರಕಾಶನದಿಂದ ತಾತ್ಕಾಲಿಕವಾಗಿ ಕಣ್ಣು ಕತ್ತಲೆ ಬಂದರೂ ಸರಿಯೇ, ಪರಿಚಿತವಾದ ಗಡಿಗೆ ಒಡೆದುಹೋದುದಕ್ಕಾಗಿ ಅಧೀರರಾಗದೆ, ಕಣ್ಣು ಚೇತರಿಸಿಕೊಳ್ಳುವ ವರೆಗೂ ತಾಳ್ಮೆಯಿಂದ ಸಹಿಸಬೇಕು.

ಇಂಗ್ಲಿಷು ಓದಿರುವವರಿಗೆ 'blinding flash' ಎಂಬ ಒಂದು ಪ್ರಯೋಗ ಪರಿಚಿತವಾಗಿದೆ. ಮಿಂಚಿನ ಜಾಜ್ವಲ್ಯತೆಗೆ ಕಣ್ಣು ಕುರುಡಾಗುತ್ತದಂತೆ. ಗಾಂಧೀ ಎಂಬ ದೀಪದ ಸುತ್ತ ಇದ್ದ ದೇಹವೆಂಬ ಗಡಿಗೆ ಒಡೆದಾಗ ನಾವು ಕಂಡದ್ದು ಇಂತಹ 'blinding flash.' ಕ್ರಮೇಣ ಕಣ್ಣು ಚೇತರಿಸಿಕೊಳ್ಳುತ್ತದೆ. ಚೇತರಿಸಿಕೊಂಡ ಕಣ್ಣು ಈ ಹೊಸ ಬೆಳಕಿಗೆ ಒಗ್ಗಿಕೊಂಡು, ನೇರವಾದ ಮಾರ್ಗದಲ್ಲಿ ನಡೆದುಹೋಗಲು ಸಹಾಯಕವಾಗುತ್ತದೆ.

ಬೆಳಕಿನ ಬದಲಾವಣೆಗಳಿಗೆ ಕಣ್ಣು ಚುಳ್ಳೆನ್ನುವುದು ಒಳ್ಳೆಯ ಗುರುತು; ಕಣ್ಣಿನ ಪಾಟವ ಇನ್ನೂ ಇದೆ ಎಂಬುದಕ್ಕೆ ಅದು ಸಾಕ್ಷಿ. ಬೆಳಕು ಬರುವುದೇ ಸ್ವಲ್ಪವಾದರೂ ಆಗಲಿ, ಅಥವಾ ಕಣ್ಣು ಕಾಣುವುದೇ ಕಡಿಮೆಯಾದರೂ ಆಗಲಿ, ಗೋಳಾಡುವುದರಿಂದ ಯಾವ ಪ್ರಯೋಜನವೂ ಇಲ್ಲ. ಸೂರ್ಯನ ಬೆಳಕು ಮರೆಯಾಗಿ ರಾತ್ರಿ ಬಂದರೂ ನಕ್ಷತ್ರಗಳ ಮಿಣುಕುಬೆಳಕು ಉಂಟೇ ಉಂಟು. ಕಣ್ಣೇ ಕಾಣದೆ ಹೋದರೂ ಉಳಿದ ಇಂದ್ರಿಯಗಳಿಂದ ಆದಷ್ಟು ಸಾಧಿಸಬೇಕು. ಇದು ಧೀರರ ಮಾರ್ಗ, ಇದು ಬದುಕುವ ದಾರಿ.

'ಮಂಕುತಿಮ್ಮ'ನು ತನ್ನ 'ಕಗ್ಗ'ದಲ್ಲಿ ಹೇಳಿದ ಹಾಗೆ

ಅರೆಗಣ್ಣು ನಮಗೆಂದು ಕೊರಕೊರಗಿ ಫಲವೇನು ?
ಅರೆಬೆಳಕು ಧರೆಯೊಳೆಂದೊರಲಿ ಸುಖವೇನು ?
ಇರುವ ಕಣ್ ಇರುವ ಬೆಳಕಿನೊಳಾದನಿತ ನೋಡಿ
ಪರಿಕಿಸಿದೊಡದು ಲಾಭ—ಮಂಕುತಿಮ್ಮ

# “ಸೂತ್ರೇ ಮಣಿಗಣಾ ಇವ”

## ‘ದಾರದಲ್ಲಿ ಮಣಿಗಳ ಗುಂಪು ಹೇಗೋ ಹಾಗೆ’

ಈದಿನ ನಡೆದ ಘಟನೆಯನ್ನು ನೆನ್ನೆ ಮೊನ್ನೆ ನಡೆದುದರ ಸಂಗಡ ಹೋಲಿಸಿ ಹೊಂದಿಸಿ ನೋಡುವುದು ಸ್ಮರಣಶಕ್ತಿಯ ಒಂದು ಸಹಜ ವಾದ ವ್ಯಾಪಾರ. ಇದರಿಂದಲೇ ಉಪಮಾನಗಳೂ ರೂಪಕಗಳೂ ಕಾವ್ಯಗಳಲ್ಲಿ ಅಲಂಕಾರವಾಗಿರುವುದು.

ಗಾಂಧಿಯವರು ಬದುಕಿದ್ದಾಗ, ಅವರ ಜೀವನಚರ್ಯೆಯನ್ನು ಕಂಡವರಿಗೆ ಭಗವಂತನಾದ **ಬುದ್ಧ**ನ ನೆನಪಾಗುತ್ತಿತ್ತು. ಅದೇ ಸರ್ವ ಜೀವಹಿತಾನುಕಂಪ, ಅದೇ ಸತ್ಯಶೋಧನೆ, ಅಹಿಂಸಾಧಾರಣೆ, ಅದೇ ದೃಢನಿಶ್ಚಯ, ಅದೇ ಅಪ್ರಮಾದ, ಅದೇ ನಿರಂತರವಾದ ಆರಬ್ಧವೀರ್ಯ, ಅಂಥದೇ ನಿಷ್ಠುರವಾದ ಬ್ರಹ್ಮಚರ್ಯ, ಆತನ ಹಾಗೆಯೇ ಸಮರ್ಥರಾದ ಶಿಷ್ಯರ ಸಂಪಾದನ, ಅವರ ಶಿಕ್ಷಣ, ಸಂಘಸಂಸ್ಥಾಪನ, ದಲಿತರ ಹರಿ ಜನರ ಉದ್ಧಾರ, ಸ್ತ್ರೀತ್ವದಲ್ಲಿ ಮಾತೃಪ್ರೇಮ, ಧರ್ಮದಲ್ಲಿ ಅಚಲವಾದ ನಿಷ್ಠೆ, ಆರ್ತರ ಯಾತನೆಯನ್ನು ನಿವಾರಿಸುವುದಕ್ಕಾಗಿ ಆತನಂತೆಯೇ ದೇಶದ ಮೂಲೆಮೂಲೆ ತಿರುಗಿದ್ದು, ಆತನ ಹಾಗೆಯೇ ರಾಜಾಧಿರಾಜರು ಗಳಿಂದ ತೊಡಗಿ ಹೆಣ್ಣು ಹಾದರಿ ಹೊಲೆಯ ಹಸುಳೆ ಎಲ್ಲರವರೆಗೂ ತನ್ನನ್ನು ತಾನು ಮರೆತು ಬೆರೆತದ್ದು—ಇದೇ ಮೊದಲಾದ ಅನೇಕ ಸಾಮ್ಯಗಳನ್ನು ಕಂಡು, ಬುದ್ಧನಲ್ಲಿ ಭಕ್ತಿಯಿದ್ದವರು ಕೂಡ ಗಾಂಧಿ ಯವರನ್ನು ‘ಪ್ರತ್ಯಕ್ಷಬುದ್ಧ’ ಎಂದು ಕರೆಯುವಷ್ಟು ಮೆಚ್ಚಿದರು. ಆತನ ಹಾಗೆಯೇ ಸುಮಾರು ಎಂಬತ್ತು ವರುಷಗಳ ಆಯುಷ್ಕಾಲ ವನ್ನು ಗಾಂಧಿಯವರು ಈ ಧರ್ಮಜೀವನದಲ್ಲಿ ಬಾಳಿದರು ಎಂಬುದು ಕೂಡ ಅವರಿಗೂ ಬುದ್ಧನಿಗೂ ಇರುವ ಇನ್ನೊಂದು ಸಮಾನ ವಾದ ಅಂಶ.

ಗಾಂಧಿಯವರನ್ನು, ಅವರು ಬದುಕಿದ್ದಾಗ, **ಯೇಸುಕ್ರಿಸ್ತ**ನಿಗೆ ಹೋಲಿಸುತ್ತಿದ್ದರು. ಇಬ್ಬರೂ ಧರ್ಮರಾಜ್ಯದ ಸ್ಥಾಪನೆಗಾಗಿ, ಸೀಸರನ ವನ್ನು ಸೀಸರನಿಗೆ ಒಪ್ಪಿಸಿಯೇ ತೀರಬೇಕೆಂದು ವಾದಿಸಿದವರು.

ಆದಕ್ಕಾಗಿ ಅನೇಕ ಉಪವಾಸಗಳನ್ನು ತಾಳಿ, ಸೆರೆಯನ್ನು ಅನುಭವಿಸಿ, ಐಹಿಕಭೋಗಗಳಿಗೆ ವಿಮುಖರಾಗಿ, ಅಧ್ಯಾತ್ಮದಲ್ಲಿ ರಮಿಸಿದವರು. ಆದರೆ ಈ ಹೋಲಿಕೆಗಳಿಗಿಂತ ಅವರ ಕಾರ್ಯಫಲಗಳಲ್ಲಿ ಕಂಡುಬರುವ ಭಿನ್ನತೆಗಳೇ ಹೆಚ್ಚು. ಯೇಸುಸ್ವಾಮಿಯ ಆಯುಷ್ಕಾಲವು ಕೇವಲ ಮೂವತ್ತು ವರುಷ ಮಾತ್ರ; ಗಾಂಧಿಯವರು ಮೃತರಾದಾಗ ಅವರಿಗೆ ವಯಸ್ಸು ಎಪ್ಪತ್ತೊಂಬತ್ತು. ಯೇಸುವಿನ ಧರ್ಮಪ್ರವರ್ತನದ ಫಲ ಆತನ ಜೀವಮಾನದಲ್ಲಿ ಅಷ್ಟಾಗಿ ಪ್ರಕಟವಾಗಲಿಲ್ಲ; ಆತನ ಮರಣಾನಂತರದಲ್ಲಿ, ಆತನ ಶಿಷ್ಯರ ಪ್ರಯತ್ನಗಳ ಫಲವಾಗಿ, ಆತನ ಕಾಲದಲ್ಲಿ ಯೋರ್ದನ್ ನದಿಯ ತೀರದಲ್ಲಿ ಮಾತ್ರ ಹರಡಿದ್ದುದು ಅನಂತರ ದೇಶದೇಶಗಳಲ್ಲೂ ದಿಕ್ಕುದಿಕ್ಕುಗಳಲ್ಲೂ ಹರಡಿತು. ಗಾಂಧಿಯವರು ತಮ್ಮ ಪ್ರಯತ್ನಗಳ ಫಲಗಳಲ್ಲಿ ಬಹುಭಾಗವನ್ನು—ಅವರಿಗೆ ಪ್ರಿಯವಾದ ಭಾರತದ ಸ್ವಾತಂತ್ರ್ಯವನ್ನು, ಹಿಂದೂ ಮುಸ್ಲಿಂ ಸಖ್ಯವನ್ನು—ತಕ್ಕಷ್ಟು ಮಟ್ಟಿಗಾದರೂ ಕಂಡರು. ಯೇಸುವನ್ನು ಆತನ ಜನವೆನ್ನಿಸಿದ ಯೆಹೂದ್ಯರೇ ಒಪ್ಪದೆ ಶಿಲುಬೆಗೆ ಹಾಕಿಸಿದರು ಗಾಂಧಿಯವರಾದರೋ ಅವರ ಜನವೆನ್ನಿಸಿದ ಹಿಂದೂ ಸಮಾಜದ ಪಾಲಿಗೆ ಅವರು ಬದುಕಿರುವಾಗಲೇ ಅವತಾರ ಪುರುಷರೆನ್ನಿಸಿಕೊಂಡರು. ಅವರಿಗೆ ಗುಂಡಿಕ್ಕಿದವನನ್ನು 'ಹಿಂದೂ' ಎಂದು ಕರೆದರೂ, ಪಂಡಿತ ನೆಹರು ಅವರು ಹೇಳಿದಂತೆ, ಅವನೊಬ್ಬ 'ಪಾಗಲ್', ಬುದ್ಧಿಕೆಟ್ಟವನು.

ಇನ್ನೂ ಹಾಗೆ ಹಳೆಯ ಕಾಲದವರೊಡನೆ ಹೋಲಿಸುವುದಾದರೆ ಗಾಂಧಿಯವರನ್ನು **ಸಾಕ್ರುಟಿಸ**ನಿಗೆ ಹೋಲಿಸಬಹುದು. ಸಾಕ್ರುಟಿಸನ ಹಾಗೆಯೇ ಅಕಿಂಚನರಾಗಿ, ಆತನ ಹಾಗೆಯೇ ಸದಾ ಸತ್ಯವೆಂಬುದರ ಶೋಧನೆಯಲ್ಲಿಯೇ ತೊಡಗಿ, ಆತನ ಹಾಗೆಯೇ ಅದೇ ಶೋಧನೆಯ ಕಾರ್ಯದಲ್ಲಿ ತಿಳಿದವರ ಸ್ನೇಹವನ್ನೂ ತಿಳಿಯದವರ ದ್ವೇಷವನ್ನೂ ಸಂಪಾದಿಸಿಕೊಂಡು, ಸಾಕ್ರುಟಿಸನ ಹಾಗೆಯೇ ಮರಣವನ್ನು ಸ್ವಾಗತಿಸಬೇಕಾದ ಮಿತ್ರನೆಂದು ಗಣಿಸಿ, ಆತನ ಹಾಗೆಯೇ ಸಾಯುವ ಗಳಿಗೆಯಲ್ಲೂ ದೈವವನ್ನು ಮರೆಯದೆ ನೆನೆದ ಈ ಗುಣಗಳಿಂದ ಸಾಕ್ರುಟಿಸನಿಗೂ ಗಾಂಧಿಯವರಿಗೂ ಹೋಲಿಕೆ ಹೆಚ್ಚು ಹತ್ತಿರ.

ಗಾಂಧಿಯವರು ತಮಗೆ ಇಂತಹ ಮರಣ, ತಾವು ನಂಬಿ ಮಾಡುವ ಕೆಲಸದಿಂದ ಮನಸ್ಸು ಕದಡಿಹೋದವನ ಕೈಯ ಮರಣ, ಬಂದರೂ ಬಂದೀತೆಂದು ಒಂದೆರಡು ಸಲ ಆಪ್ತರಲ್ಲಿ ಹೇಳಿದ್ದರಂತೆ. ಆದರೆ ಗಾಂಧಿಯಂತಹ ಅಹಿಂಸಾಜೀವಿಗೆ ಇಂತಹ ಹಿಂಸಾಮರಣ ಒದಗುವುದೆಂದರೆ ಯಾರಿಗೂ ನಂಬಲಾಗುತ್ತಿರಲಿಲ್ಲ. ಕೆಲವರು ಈ ಮರಣವನ್ನು 'ದುರ್ಮರಣ' ಎಂದರು. ಇದು ಮರಣದ ಬಗೆಗೆ ಸರಿಯಾದ ತಿಳಿವಳಿಕೆಯಿಲ್ಲದೆ ಆಡುವ ಮಾತು. ಸಾವಿಗೆ 'ಸಮವರ್ತಿ' ಎಂಬುದೂ ಒಂದು ಹೆಸರು. ಸಾವು ಯಾವ ರೀತಿಯಲ್ಲಿ ಬಂದರೂ ಅದು ಸಾವೇ. ಆದರೂ ಆ ಸಮಯದ ಯಾತನೆಯನ್ನು ಮೊಂಡುಮಾಡುವುದಕ್ಕಾಗಿ ಕೆಲವರು 'ಭಗವಂತನಾದ ಕೃಷ್ಣನು ಕೂಡ ಹೀಗೆಯೇ ಯಾವನೋ ಬೇಡನ ಬಾಣದಿಂದ ಏಟುತಿಂದು ಕಾಲವಾದನು' ಎಂದರು. ಹೌದು, ಹೀಗೆಂದು ಭಾಗವತದಲ್ಲಿದೆ. ಆದರೆ ಅದೇ ಭಾಗವತದಲ್ಲೇ, ಆ ಬೇಡನು ಕೃಷ್ಣನನ್ನು ಕೊಲ್ಲಬೇಕೆಂಬ ಉದ್ದೇಶದಿಂದ ಬಾಣಹೊಡೆದವನಲ್ಲವೆಂದೂ, ಅವನು ಮಾಡಿದುದು ಪ್ರಮಾದವಾದರೂ ಕೃಷ್ಣನು ಅವನಿಗೆ ಮುಕ್ತಿಯನ್ನು ಕರುಣಿಸಿದನೆಂದೂ, ಏಟು ತಗುಲಿದ ಮೇಲೆಯೂ ಕೃಷ್ಣನು ಎಚ್ಚರವಾಗಿಯೇ ಇದ್ದು, ಯೋಗದಿಂದ ತಾನು ದೇಹತ್ಯಾಗಮಾಡಿದನೆಂದೂ ಹೇಳಿದೆ. ಗಾಂಧಿಯವರ ಮರಣದ ವೃತ್ತಾಂತವನ್ನು ಎಲ್ಲರೂ ಬಲ್ಲರು; ಅದಕ್ಕೂ ಇದಕ್ಕೂ ಹೋಲಿಕೆ ಅಷ್ಟು ಇಲ್ಲ ಎಂಬುದನ್ನು ಕಾಣಬಲ್ಲರು.

ಎಂದರೆ ಕೃಷ್ಣನಿಗೂ ಗಾಂಧಿಯವರಿಗೂ ಹೋಲಿಕೆ ಇಲ್ಲವೆಂದಲ್ಲ. ಮಹಾಭಾರತಯುದ್ಧದಲ್ಲಿ ಕೃಷ್ಣನು ಪಾಂಡವರ ಕಡೆ ನಿಂತು, ತಾನು ಸೈನಿಕನಾಗದೆ ಸಾರಥಿಯಾಗಿಯೇ ಇದ್ದು, ತನ್ನ ಪಕ್ಷಕ್ಕೆ ವಿಜಯವನ್ನು ಸಾಧಿಸಿಕೊಟ್ಟ, ಹಾಗೆ ಗಾಂಧಿಯವರು ಕಾಂಗ್ರೆಸಿನ ನಾಲ್ಕಾಣೆಯ ಸದಸ್ಯತನವೂ ಇಲ್ಲದೆ ಆ ಕಾಂಗ್ರೆಸಿನ ಅಹಿಂಸಾಯುದ್ಧದ ಸೂತ್ರಗಳನ್ನು ಹಿಡಿದು, ಭಾರತಕ್ಕೆ ಸ್ವತಂತ್ರತೆಯನ್ನು ಸಾಧಿಸಿದ ಈ ಒಂದು ಹೋಲಿಕೆ ಸಾಕು. ಅಥವಾ, ಸ್ಥಾನಭ್ರಷ್ಟರಾಗಿದ್ದ ರಾಜಾಧಿರಾಜರುಗಳನ್ನು ತಾನು ಉದ್ಧರಿಸಿ ಪುನಃ ಪ್ರತಿಷ್ಠೆಮಾಡಿದರೂ ತಾನು ಮಾತ್ರ ಯಾವ ರಾಜಪದವಿಗೂ ಹತ್ತದೆ ಅನಾಸಕ್ತನೇ ಆಗಿದ್ದ ಕೃಷ್ಣನ

ಹಾಗೆಯೇ ಗಾಂಧಿಯವರಾದರೂ ಈ ಹೊಸಭಾರತದ ಯಾವ ಅಧಿಕಾರ ಸ್ಥಾನಕ್ಕೂ ಆಶಿಸದೆ ಅನಾಸಕ್ತರಾಗಿದ್ದ ಈ ಒಂದು ಹೋಲಿಕೆ ಸಾಕು. ಆದರೂ ಅನಾಸಕ್ತಿಯನ್ನು ಅವರು ಹಿಡಿದು ನಡೆದುದನ್ನು ನೋಡಿದರೆ, ಕೃಷ್ಣನ ಗೀತೆಗೆ ಅವರು ಕಾರ್ಯತಃ ಶರಣಾದುದನ್ನು ನೋಡಿದರೆ, ಅವರನ್ನು ಕೃಷ್ಣನೆನ್ನುವುದಕ್ಕಿಂತ ಅಭಿನವ **ಅರ್ಜುನ** ಎಂದರೆ ಸರಿಯಾದೀತು. ಆದರೂ ಅರ್ಜುನ ಬೆರಕೆಬಂಗಾರ! ಗಾಂಧಿ ಚೊಕ್ಕಚಿನ್ನ!

ಗೀತೆಯ ಸಾಕುಮಗ ನಾನು ಎಂದ ಗಾಂಧಿಯವರನ್ನು ನೋಡಿ ಅರ್ಜುನನ ಜ್ಞಾಪಕವಾದ ಹಾಗೆಯೇ, ಅವರನ್ನು ನೆನೆದರೆ **ಭರತನ** ಜ್ಞಾಪಕವಾಗುತ್ತದೆ, **ಹನುಮಂತನ** ಜ್ಞಾಪಕವೂ ಆಗುತ್ತದೆ.

ರಾಜನಾದ ರಾಮನು ಕಾಡಿಗೆ ಹೋದರೂ, ಅವನು ಕೊಟ್ಟ ಪಾದುಕೆಗಳು ತನಗೆ ಏನನ್ನೂ ಹೇಳದಿದ್ದರೂ, ತಾನು ಮಾತ್ರ ಅವುಗಳಿಗೆ ವರದಿಯೊಪ್ಪಿಸಿ, ದೊರೆತನದ ಭಾರವನ್ನೆಲ್ಲಾ ವಹಿಸಿದರೂ ಭರತನು ತಾನು ದೊರೆಯಾಗಲಿಲ್ಲ. 'ಒಡೆಯನಾದವನು ಎಂದೋ ಬಂದು ಕೇಳುತ್ತಾನೆ. ಅದಕ್ಕೆ ನಾನು ಉತ್ತರ ಕೊಡಬೇಕು' ಎನ್ನುವ ಹಾಗೆ ನೇರವಾದ ನಡತೆಯಿಂದ, ತನ್ನ ದೇಹ ಬುದ್ಧಿಶಕ್ತಿ ಜೀವಶಕ್ತಿಗಳು ಎಲ್ಲವನ್ನೂ ಭರತನು ರಾಜ್ಯಕ್ಕಾಗಿ ಮುಡಿಪುಕೊಟ್ಟನು. ತಾನು ಎಲ್ಲವನ್ನೂ ನಡಸಿ ನೆರವೇರಿಸುವನು, ಆದರೆ ಯಾವುದೂ ತನ್ನದಲ್ಲ. ಆದರೂ ರಾಜ್ಯ ತನ್ನದಲ್ಲವೆಂದು ಯಾವುದನ್ನೂ ನಡಸದೆ ಬಿಡುವನಲ್ಲ. ಸ್ವತಂತ್ರನಾಗಿ ತಾನು ನಡೆದರೂ ರಾಮನಿಗೆ ವಿಧೇಯತೆಯನ್ನು ಸಲ್ಲಿಸದೆ ಬಿಡುವನಲ್ಲ. ಭರತನು ಇಂತಹ ಕಡುಯೋಗಿ. 'ದೊರೆತನದ ಜಟಿಲಗಳನ್ನೂ ಕುಟಿಲಗಳನ್ನೂ ಕಠಿನಗಳನ್ನೂ ರಾಮನು ಬಂದ ಮೇಲೆ ತೀರಿಸಿಕೊಳ್ಳಲಿ' ಎಂದು ಭರತನು ಅವುಗಳನ್ನು ತೀರಿಸದೆ ಉಳಿಸಿದನೇನು? ತನ್ನ ಜ್ಞಾನದ ಕರ್ತವ್ಯಭಾರವೇನು ಎಂಬುದನ್ನು ತಿಳಿದು ತಾನು ರಾಜ್ಯದ ಭಾರವನ್ನು ಹೊತ್ತು ನಡೆದನು. ಕಣ್ಣೆದುರಿಗಿಲ್ಲದ ಆ ಸ್ವಾಮಿಯನ್ನು ನೆನೆನೆನೆದು, ಸತ್ಯವಾದ ಭಕ್ತಿಯಿಂದ ಭರತನು ಸೇವೆ ಸಲ್ಲಿಸಿದನು. ಇಂಥ ನಯವನ್ನೇ ಅನುಸರಿಸಿ, ಸ್ವತ್ವದ ಆಸೆಯನ್ನು ನೀಗಿ ತಮ್ಮ ನಿತ್ಯಜೀವನವನ್ನು ನಡೆಸಿದವರಲ್ಲಿ ಗಾಂಧಿಯವರು ಅಗ್ರ್ಯರು. 'ಈ ಭೂಮಿಯೇ ಕೋಸಲ,

ಪರಬ್ರಹ್ಮನೇ ಶ್ರೀರಾಮನು, ಭರತನ ಹಾಗೆ ಅನುನಯದಿಂದ ಕೆಲಸ ಮಾಡುವವರು ನಾವು, ಅರಸನ ಊಳಿಗವೇ ನಮ್ಮ ಸಂಸಾರದ ಆಡಳಿತ' ಎಂದು* ಗಾಂಧಿಯವರು ಭರತನಂತೆ ಈ ರಾಮರಾಜ್ಯಕ್ಕೆ ತಮ್ಮ ಸೇವೆಯನ್ನು ಹರುಷದಿಂದ ಸಲ್ಲಿಸಿದರು.

ಹನುಮಂತನಿಗೆ ಹೇಗೋ ಗಾಂಧಿಯವರಿಗೂ ಹಾಗೆಯೇ ರಾಮನೆಂದರೆ ಪ್ರಾಣ. ಚಿಕ್ಕಂದಿನಲ್ಲಿ ಅವರಿಗಿದ್ದ ಭೂತಗಳ ಭೀತಿಯನ್ನು ದಾಸಿಯೊಬ್ಬಳು ಹೇಳಿಕೊಟ್ಟ ರಾಮನಾಮದ ಬಲದಿಂದ ಗೆದ್ದರಂತೆ. ವಿಷಯಾಸಕ್ತಿಗೆ ಬಲಿಯಾಗದಂತೆ ಕಾಪಾಡಿಕೊಳ್ಳಲು ರಾಮನಾಮ ಅವರಿಗೆ ಸಹಾಯವಾಯಿತಂತೆ. 'ನಿರ್ಬಲ್ ಕೆ ಬಲ್ ರಾಮ್'—ಬಲವಿಲ್ಲದವರಿಗೆ ರಾಮನೇ ಬಲ ಎನ್ನುತ್ತಿದ್ದರು. ಅವರ ಕಡೆಯ ದಿನಗಳಲ್ಲಂತೂ 'ರಾಮನಾಮವೇ ಸರ್ವವ್ಯಾಧಿಗಳಿಗೂ ಸಿದ್ಧೌಷಧ' ಎಂದು ಸಾರುತ್ತಿದ್ದರು. ಸಾಯುವ ಗಳಿಗೆಯಲ್ಲಿ 'ರಾಮ! ರಾಮ!' ಎಂದು ಜಪಿಸುತ್ತಲೇ ದೇಹವನ್ನು ಬಿಟ್ಟರು.

ಗಾಂಧಿಯವರ ಮರಣಕ್ಕೆ ರಿವಾಲ್ವರಿನ ಗುಂಡು ಕಾರಣವಾಯಿತು ಎಂಬುದನ್ನು ಕೇಳಿ ಕೆಲವರು ಅಮೆರಿಕದ **ಏಬ್ರಹಾಂಲಿಂಕನ್** ಹೀಗೇ ಗುಂಡಿಗೆ ತುತ್ತಾದ ಎಂಬುದನ್ನು ಜ್ಞಾಪಿಸಿಕೊಂಡರು. ಲಿಂಕನ್ ಪರಮ ದೇಶಪ್ರೇಮಿ, ನಿಃಸ್ವಾರ್ಥಿ, ದೈವನಿಷ್ಠ, ದೃಢವ್ರತ, ಮಹಾಪುರುಷ. ಅದರ ಬಗೆಗೆ ವಾದಕ್ಕೆ ಅವಕಾಶವಿಲ್ಲ. ಆದರೆ ಲಿಂಕನ್ನಿನ ಹತ್ಯೆಗೆ ಉತ್ತರ ದಕ್ಷಿಣ ಎಂಬ ಅಮೇರಿಕದ ಸಂಸ್ಥಾನಗಳಿಗೆ ಸಂಬಂಧಪಟ್ಟ ರಾಜಕೀಯ ಕಾರಣವಾಗಿತ್ತು; ಗಾಂಧಿಯವರ ಹತ್ಯೆಗೆ ಹಿಂದೂ ಮುಸ್ಲಿಂ ಎಂಬ ವಿಪರೀತದ ಮತದೃಷ್ಟಿ ಕಾರಣವಾಯಿತು. ಇಬ್ಬರು ಮಹಾಪುರುಷರ ಮರಣದಲ್ಲಿ ಗುಂಡಿನೇಟಿನ ಸಾಮ್ಯ ಕಂಡುಬಂದರೂ, ಅದರೊಳಗಿನ ಭೇದ ಅಗಾಧವಾದುದು: ಗುಂಡಿನ ಏಟು ತಗುಲಿದಾಗ ಲಿಂಕನ್ ನಾಟಕಗೃಹದಲ್ಲಿ ಭೋಗಪಡುತ್ತಿದ್ದನು; ಗಾಂಧಿಯವರು ಗುಂಡು ತಾಗುವ ಹೊತ್ತಿನಲ್ಲಿ ದೇವರ ಪ್ರಾರ್ಥನೆಗೆ ಮನಸ್ಸನ್ನು ಸಜ್ಜು ಮಾಡಿಕೊಂಡು ಹೊರಟಿದ್ದರು. ಇದೇನೂ ಸಣ್ಣ ವ್ಯತ್ಯಾಸವಲ್ಲ!

* 'ಮಂಕುತಿಮ್ಮನ ಕಗ್ಗ' ಪದ್ಯ ೭೦೬—೭೧೧.

ಪಾರಸಿಗಳೊಬ್ಬರು ಗಾಂಧಿಯವರ ಮರಣಕ್ಕೂ ಸ್ಪರತುಷ್ಟ್ರನ ಮರಣಕ್ಕೂ ಒಂದು ಹೋಲಿಕೆಯನ್ನು ಕಾಣಿಸಿದರು*: ಸ್ಪರತುಷ್ಟ್ರನು ಮರಣಹೊಂದುವಾಗ ಆತನಿಗೆ ವಯಸ್ಸು ಎಪ್ಪತ್ತೇಳು ಆಗಿತ್ತಂತೆ. ಆತನು ದೇವಮಂದಿರದಲ್ಲಿ ಪ್ರಾರ್ಥನೆ ಮಾಡುತ್ತಿದ್ದಾಗ, ಆತನಿಗೆ ಆಗದವನೊಬ್ಬನು ಹಿಂದಿನಿಂದ ಬಂದು ಆತನನ್ನು ಕೊಂದನಂತೆ.

ಹೀಗೆ ಅವರವರಿಗೆ ಅವರವರ ಗ್ರಂಥಾನುಭವಗಳ ಅನುಸಾರವಾಗಿ ಅನೇಕ ಹೋಲಿಕೆಗಳು ತೋರಿಬರುವುದು ಸಹಜ. ಈ ರೀತಿಯ ಹಲವಾರು ಹೋಲಿಕೆಗಳನ್ನು ಜನ ಅಲ್ಲಲ್ಲೇ ಎತ್ತಿಕೊಂಡು ಆಡಿರುವರಾದರೂ ನನ್ನಮಟ್ಟಿಗೆ ಗಾಂಧಿಯವರನ್ನು ಜ್ಞಾಪಿಸಿಕೊಂಡಾಗಲೆಲ್ಲಾ ಅಶೋಕನ ನೆನಪೇ ನನಗಾಗುತ್ತದೆ.

ಅಶೋಕನು ಮೊದಲು ಕ್ರೂರಿಯಾಗಿ 'ಚಂಡಾಶೋಕ' ಎನ್ನಿಸಿಕೊಂಡಿದ್ದನೆಂದೂ ಅನಂತರ ತನ್ನ ಕ್ರೌರ್ಯವನ್ನು ಬಿಟ್ಟು 'ಧರ್ಮಾಶೋಕ' ನಾದನೆಂದೂ ಬೌದ್ಧಪುರಾಣಗಳು ಹೇಳುತ್ತವೆ. ತಾನು ರಾಜ್ಯಾಭಿಲಾಷೆಯಿಂದ ಕಳಿಂಗದ ಮೇಲೆ ಯುದ್ಧಮಾಡಿದಂತೆಯೂ, ಆಗ ಕಂಡ ದುಃಖದಿಂದ ತನ್ನ ಹಿಂಸಾಪ್ರವೃತ್ತಿಗೆ ಹೇಸಿ. ತಾನು ಅಹಿಂಸೆಯನ್ನು ಬಲವಾಗಿ ಹಿಡಿದಂತೆಯೂ ಆತನು ತಾನೇ ತನ್ನ ಶಾಸನವೊಂದರಲ್ಲಿ ಲೋಕದೆದುರಿಗೆ ಒಪ್ಪಿಕೊಂಡಿರುವ ಹಾಗೆ ಗಾಂಧಿಯವರಾದರೂ ತಮ್ಮ ಬಾಲ್ಯದಲ್ಲಿ ಸುಳ್ಳು, ಕಳ್ಳತನ ಮುಂತಾದ ಹಿಂಸಾಪ್ರವೃತ್ತಿಗಳಿಗೆ ಬಿದ್ದು, ಕ್ರಮೇಣ ಅದರಿಂದ ತಮ್ಮನ್ನು ತಾವೇ ಉದ್ಧಾರಮಾಡಿಕೊಂಡು, ತಮ್ಮ ಪರಿವರ್ತನವನ್ನು ತಾವೇ ತಮ್ಮ ಜೀವನಚರಿತ್ರೆಯಲ್ಲಿ ಲೋಕದೆದುರಿಗೆ ಒಪ್ಪಿಕೊಂಡಿದ್ದಾರೆ.

'ದಿನಕ್ಕೆ ಐದು ವಸ್ತುಗಳಿಗಿಂತ ಹೆಚ್ಚಿನ ವಸ್ತುಗಳನ್ನು ಊಟಕ್ಕೆ ಸೇವಿಸುವುದಿಲ್ಲ' ಎಂದು ವ್ರತ ಹಿಡಿದು, ಅದರಲ್ಲಿ ಉಪ್ಪೂ ಒಂದು ವಸ್ತು ಎಂದು ಗಾಂಧಿಯವರು ಲೆಕ್ಕಮಾಡುತ್ತಿದ್ದುದನ್ನು ನೋಡಿದರೆ, ಅಶೋಕನು ತನ್ನ ಅಡಿಗೆಯ ಮನೆಯಲ್ಲಿ ವಧೆಮಾಡುತ್ತಿದ್ದ ಪ್ರಾಣಿಗಳ ಸಂಖ್ಯೆಯನ್ನು ತೀರ ಕನಿಷ್ಠಪ್ರಮಾಣಕ್ಕೆ ಇಳಿಸಿದ ಶಾಸನದ ನೆನಪಾಗುತ್ತದೆ.

* BLITZ, Feb. 7, 1948,

ಹಿಂದೂಗಳಲ್ಲಿ ಸವರ್ಣ-ಅಸವರ್ಣ, ಭಾರತೀಯರಲ್ಲಿ ಹಿಂದೂ-ಮುಸ್ಲಿಂ, ಜಗತ್ತಿನಲ್ಲಿ ಬಿಳಿಯ-ಕರಿಯ, ಎಂಬ ಭೇದಭಾವಗಳನ್ನು ಸವರುವುದಕ್ಕೆ ಗಾಂಧಿಯವರು ಮಾಡಿದ ಪ್ರಯತ್ನಗಳು ಅಶೋಕನ ಹನ್ನೆರಡನೆಯ ಶಾಸನಕ್ಕೆ ಪ್ರಯೋಗವಿದ್ದ ಹಾಗಿವೆ.

ಅದೇ ಅಶೋಕನ ಇನ್ನೊಂದು ಶಾಸನದಲ್ಲಿ "ಯಾವ ಪ್ರಜೆಯಾದರೂ ಯಾವ ಹೊತ್ತಿನಲ್ಲಾದರೂ ಅಶೋಕನು ಏನು ಮಾಡುತ್ತಿದ್ದರೂ ನಿರಾತಂಕದಿಂದ ಹತ್ತಿರ ಬಂದು ತನ್ನ ಕಷ್ಟಗಳನ್ನು ಹೇಳಿಕೊಳ್ಳಬಹುದು' ಎಂದು ಘೋಷಣೆಮಾಡಿದುದನ್ನು ಗಾಂಧಿಯವರು ಕಾರ್ಯತಃ ಆಚರಿಸಿದರು ಎಂಬುದನ್ನು ಹಳೆಯ 'ಹರಿಜನ್' ಸಂಚಿಕೆಗಳನ್ನು ಹಾಗೇ ತಿರುವಿಹಾಕಿದರೆ ಕಾಣಬಹುದು.

ವ್ಯಕ್ತಿಯ ಶೀಲವಿವರ್ಧನವೇ ರಾಷ್ಟ್ರಜೀವನದ, ತನ್ಮೂಲಕ ಲೋಕಜೀವನದ, ಸುವ್ಯವಸ್ಥೆಗೆ ಮೂಲ ಎಂದು 'ಬುದ್ಧವಚನ'ದಲ್ಲಿ ಕಾಣುವುದನ್ನೇ ಮತ್ತೆ 'ಅಶೋಕವಚನ'ದಲ್ಲಿಯೂ ಕಾಣುತ್ತೇವೆ; ಅದನ್ನೇ ಪುನಃ 'ಗಾಂಧೀವಚನ'ದಲ್ಲಿಯೂ ಕಾಣುತ್ತೇವೆ.

ಹೀಗೆ, ಬುದ್ಧನು ತೋರಿಸಿದ ದಾರಿಯಲ್ಲಿ ನಡೆದ ಅಶೋಕನಿಗೂ ಕೃಷ್ಣನು ತೋರಿಸಿದ ದಾರಿಯಲ್ಲಿ ನಡೆದ ಗಾಂಧಿಯವರಿಗೂ ಹೆಚ್ಚು ಹತ್ತಿರವಾದ ಹೋಲಿಕೆಯಿದ್ದರೂ, ಮೇಲೆ ನಾವು ನೋಡಿದ ಒಂದೊಂದು ಹೋಲಿಕೆಯೂ ಒಂದೊಂದು ಅಂಶದಲ್ಲಿ ಇವರಿಗೆ ಹೊಂದುತ್ತದೆ ಎಂಬುದನ್ನು ಅಲ್ಲಗಳೆಯಲಾಗದು.

ಆದ್ದರಿಂದ ಗೀತೆಯ ಮಾತನ್ನು ಸ್ವಲ್ಪ ಬದಲಿಸಿ ಗಾಂಧಿಯವರಿಗೆ ಹೀಗೆ ಹೇಳಬಹುದು:

ತ್ವಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ

ಗಾಂಧಿಯವರನ್ನು ಸೂತ್ರವಾಗಿ ಮಾಡಿಕೊಂಡು ಅವರಲ್ಲಿ ಈ ಇವು ಎಲ್ಲವೂ ಮಣಿಗಳಂತೆ ಪೋಣಿಸಿಕೊಂಡಿವೆ.

# ಗಾಂಧೀ ಗಾಯತ್ರಿ

## "ಸಂಯಮ, ಸಮವಾಯ, ಸಾರವೃದ್ಧಿ"

**ಗಾಯತ್ರಿ** ಎಂಬುದು 'ನಮ್ಮ ಬುದ್ಧಿಶಕ್ತಿಯನ್ನು ಕೆರಳಿಸು' ಎಂದು ದೇವತೆಯನ್ನು ಪ್ರಾರ್ಥಿಸಿಕೊಳ್ಳುವ ಮಂತ್ರ. ವೇದದಲ್ಲಿ ಗಾಯತ್ರಿಗಳು ಹಲವಾರು ಇವೆ. ಅವುಗಳಲ್ಲಿ ಸೂರ್ಯನನ್ನು ಪ್ರಾರ್ಥಿಸಿಕೊಳ್ಳುವ ಗಾಯತ್ರಿಯೇ ಸರ್ವಶ್ರೇಷ್ಠವೆಂದು ಅಂಗೀಕೃತವಾಗಿದೆ.

**ಓಂ ತತ್ ಸವಿತುರ್ವರೇಣಿಯಂ**
**ಭರ್ಗೋ ದೇವಸ್ಯ ಧೀಮಹಿ**
**ಧಿಯೋ ಯೋ ನಃ ಪ್ರಚೋದಯಾತ್**

'ಓಂ. ಯಾವಾತನು ನಮ್ಮ ಬುದ್ಧಿಶಕ್ತಿಯನ್ನು ಕೆರಳಿಸುವನೋ ಆ ಬೆಳಕಿನ ದೇವನನ್ನು, ಆ ಉತ್ಕೃಷ್ಟನಾದ ಸವಿತೃವನ್ನು ಧ್ಯಾನಮಾಡುತ್ತೇವೆ' ಎಂಬ ಈ ಮಂತ್ರದಲ್ಲಿ ಭೂರ್ಭುವಸ್ಸ್ವರ್ಲೋಕಗಳೆಲ್ಲವನ್ನೂ ಪ್ರಸವಿಸಿದ ಸವಿತೃವೆಂಬ ದೇವತೆಯನ್ನು ಪ್ರಾರ್ಥಿಸುತ್ತಾರೆ. ಈ ಸವಿತೃವೇ ಜಗಚ್ಚಕ್ಷುವೆನ್ನಿಸಿದ ಸೂರ್ಯನೆಂದೂ ಹೇಳುತ್ತಾರೆ.

ಈ ಗಾಯತ್ರಿಯನ್ನು ತಿಳಿದು ಸಾಧಿಸುವವನನ್ನು, ಇದರ ಬಲದಿಂದ ತನ್ನ ಬುದ್ಧಿಯನ್ನು ಪ್ರಚೋದನೆಗೊಳಿಸಿ ತನ್ನ ಒಳಗಣ್ಣನ್ನು ಪಡೆಯುವವನನ್ನು 'ಬ್ರಹ್ಮಚಾರಿ' ಎಂದು ಹೇಳುತ್ತಾರೆ. ಈ ಬ್ರಹ್ಮದ ಕಡೆಗೆ, ಎಂದರೆ ದೊಡ್ಡದರ ಕಡೆಗೆ, ನಡೆಯುವ 'ಬ್ರಹ್ಮಚರ್ಯ'ವನ್ನು ಆರಂಭಿಸುವ ಕರ್ಮಕ್ಕೆ 'ಉಪನಯನ'ವೆಂದೂ ಕರೆಯುತ್ತಾರೆ. ದೈವ ಕೊಟ್ಟ ಹೊರಗಿನ ಕಣ್ಣಿನ ಜೊತೆಗೆ ಮನುಷ್ಯನು ಸ್ವಪ್ರಯತ್ನದಿಂದ ಒಳಗಿನ ಕಣ್ಣನ್ನೂ ಜೊತೆಗೆ ಪಡೆಯುವುದಕ್ಕೆ 'ಉಪನಯನ' ಎಂದು ಹೆಸರು. ಹೀಗೆ 'ಉಪನಯನ' ಆದವನನ್ನೇ 'ದ್ವಿಜ', ಎಂದರೆ ಎರಡನೆಯ ಸಲ ಹುಟ್ಟಿದವನು ಎಂದು ಕರೆಯುವುದು. ಈ 'ದ್ವಿಜ'ನನ್ನೇ 'ಬ್ರಾಹ್ಮಣ', ಎಂದರೆ ಬ್ರಹ್ಮವನ್ನು ಪಡೆದವನು, ಎಂದರೆ ತನ್ನ ಪ್ರಜ್ಞೆಯನ್ನೂ ತನ್ನ ಶೀಲವನ್ನೂ ಉಳಿದವರಿಗಿಂತ ದೊಡ್ಡದಾಗಿ ಬೆಳೆಸಿಕೊಂಡವನು ಎಂದು ಹೇಳುತ್ತಾರೆ. ಗಾಯತ್ರಿಯನ್ನು ತಿಳಿದು, ಅದನ್ನು

ಸಾಧಿಸಿ, ಆದರಿಂದ ಈ ಬುದ್ಧಿಶಕ್ತಿಯು ಕೆರಳಿದ ಸಿದ್ಧಿಯನ್ನು ಪಡೆದವನು ಯಾವನೋ ಆತನೇ ನಿಜವಾದ 'ಬ್ರಾಹ್ಮಣ.'

ಹೀಗೆ, ಯಾವ ಗಾಯತ್ರಿಯ ಧ್ಯಾನದಿಂದ ನರಗಣವು 'ದ್ವಿಜ' ಆಗಬಲ್ಲುದೋ, 'ಬ್ರಾಹ್ಮಣ' ಆಗಬಲ್ಲುದೋ ಆ ಗಾಯತ್ರಿಯನ್ನು ನಮಗೆ ಕರುಣಿಸಿದ ಋಷಿ **ವಿಶ್ವಾಮಿತ್ರ.** ಈತನು ಜನ್ಮತಃ ಕ್ಷತ್ರಿಯ. ಆದರೂ, ಮೊದಮೊದಲು ಕ್ಷತ್ರಿಯನ ಮದ ತುಂಬಿ ತುಳುಕುತ್ತಿದ್ದರೂ, ಬರುಬರುತ್ತಾ 'ಧಿಕ್ ಬಲಂ ಕ್ಷತ್ರಬಲಂ, ಬ್ರಹ್ಮತೇಜೋಬಲಂ ಬಲಂ' ಎಂದು ಎಚ್ಚೆತ್ತುಕೊಂಡು, ಬ್ರಹ್ಮಚರ್ಯವನ್ನು ಬಲವಾಗಿ ಹಿಡಿದು, ರಾಜರ್ಷಿಯೆನ್ನಿಸಿಕೊಂಡು, ತುತ್ತತುದಿಗೆ **ಬ್ರಹ್ಮರ್ಷಿಯೇ** ಆದವನು. ಇಂದಿಗೂ ಆತನ ಗಾಯತ್ರಿಯೇ ಬ್ರಾಹ್ಮಣರಿಗೆ ನಿತ್ಯಮಂತ್ರ.

ಈ ಗಾಯತ್ರಿಯಲ್ಲಿ ಯಾವ ಸೂರ್ಯನನ್ನು ಕುರಿತು ಧ್ಯಾನಮಾಡುತ್ತೇವೆಯೋ ಆ ಸೂರ್ಯನ ಹಾಗೆಯೇ ತಮ್ಮ ಪ್ರಭಾವವನ್ನು ದಶದಿಕ್ಕುಗಳಿಗೂ ಬೀರಿ, ವ್ಯಕ್ತಿಜೀವನ ಜನಜೀವನ ರಾಷ್ಟ್ರಜೀವನದ ಹಲವಾರು ಕ್ಷೇತ್ರಗಳನ್ನು ಮುಟ್ಟಿ, ಮುಟ್ಟಿದಲ್ಲೆಲ್ಲ ಕ್ಷೇತ್ರಕ್ಕೆ ಅನುಗುಣವಾಗಿ ಬೆಳೆವಣಿಗೆಯನ್ನು ಕೆರಳಿಸಿದವರಲ್ಲಿ ಗಾಂಧಿಯವರ ಸಮ ಈ ಯುಗದಲ್ಲಿ ಬೇರೆ ಯಾರೂ ಇಲ್ಲ ಎಂದು ಲೋಕವೇ ಹೇಳುತ್ತಿದೆ. ಇತರ ದೇಶಗಳ ಮಾತು ಹಾಗಿರಲಿ, ಈ ದೇಶದಲ್ಲಂತೂ ಈ ಮಾತು ನಿಜ. ಜನಗಳ ಹೊಟ್ಟೆ, ಬಟ್ಟೆ, ನೀತಿ, ನಡತೆ, ವಿದ್ಯಾಭ್ಯಾಸ, ಆಚಾರ, ವ್ಯವಹಾರ, ಹಣಕಾಸು, ಆರೋಗ್ಯ, ನೈರ್ಮಲ್ಯ ಮುಂತಾದ ಸಕಲ ಅಂಗಗಳಲ್ಲಿ ಯಾವುದನ್ನೂ ಅವರು ಮುಟ್ಟದೆ ಬಿಡಲಿಲ್ಲ. ಒಂದೊಂದು ಏಕದೇಶದಲ್ಲಿ ಪಂಡಿತರಾದವರು ಗಾಂಧಿಯವರ ಜ್ಞಾನದ ಪರಿಮಿತಿಯನ್ನು ಎತ್ತಿ ಆಡದೆ ಹೋಗಿಲ್ಲ. ಆದರೂ, ಆ ಕೆಲವು ಏಕದೇಶಗಳು ಮಿತಿಯೊಳಗೇ ಇದ್ದರೂ, ಜೀವನದ ವಿವಿಧ ಅಂಗಗಳಲ್ಲಿ ಹಿತವಾದ ಸಾಮರಸ್ಯವನ್ನು ಸಾಧಿಸುವುದಕ್ಕೆ ಅವರು ಪ್ರಯತ್ನಪಟ್ಟಷ್ಟು ಇತರರು ಪಟ್ಟಿರುವುದನ್ನು ನಾವು ಕಾಣೆವು. ಅವರ ಹೊಸ ಅಹಿಂಸಾಪ್ರಯೋಗ ಪದ್ಧತಿಯಿಂದ ಅವರು ಸಾಧಿಸಿಕೊಟ್ಟಷ್ಟಾದರೂ ಫಲವನ್ನು ಇತರರು ಬೇರೆ ಪದ್ಧತಿಗಳಿಂದ ಸಾಧಿಸಿದುದನ್ನೂ ನಾವು ಕಾಣೆವು.

ಹೀಗೆ, ನಮ್ಮ ಪಾಲಿಗೆ ಸೂರ್ಯನ ಹಾಗಿದ್ದ ಗಾಂಧಿಯವರು ನಮ್ಮ ಒಳಗನ್ನು ಪ್ರಚೋದಿಸುವುದಕ್ಕಾಗಿ ನಮಗೆ ಹೇಳುತ್ತಿದ್ದುದಾದರೂ ಹೊಸದೇನಲ್ಲ. ಹಿಂದಿನ ಋಷಿಗಳ ಕಾಲದಿಂದಲೂ ಬಲ್ಲವರೆಲ್ಲರೂ ಹೇಳುತ್ತಿದ್ದ ಅದೇಮಾತು: **ಸಂಯಮ, ಸಮವಾಯ, ಸಾರವೃದ್ಧಿ!**

ವಿವೇಕಾನಂದರ ವಾಣಿಯನ್ನು ಕೇಳಿದವರ ಕಿವಿಯಲ್ಲಿ ಒಂದು ಉಪನಿಷತ್ ವಾಕ್ಯ ಮೇಲಿಂದ ಮೇಲೆ ಅನುರಣನವಾಗುತ್ತದೆ:

**ಉತ್ತಿಷ್ಠತ! ಜಾಗ್ರತ!**
**ಪ್ರಾಪ್ಯ ವರಾನ್ ನಿಬೋಧತ!**

ಎದ್ದೇಳು! ಎಚ್ಚರಾಗು! 'ವರಾನ್ ಪ್ರಾಪ್ಯ ನಿಬೋಧತ' ಎಂದರೆ 'ಉತ್ಕೃಷ್ಟರಾದ ಗುರುಗಳನ್ನು ಹೊಂದಿ, ಆತ್ಮವನ್ನು ಕಂಡುಕೊ. 'ಉತ್ಕೃಷ್ಟವಾದವುಗಳನ್ನು ಪಡೆದು, ಅವುಗಳಲ್ಲಿ ಅತ್ಯುತ್ಕೃಷ್ಟ ಯಾವು ದೆಂಬುದನ್ನು ಕಂಡುಕೊ' ಎಂದೂ ಇದಕ್ಕೆ ಅರ್ಥವಾಗಬಹುದು.

ಒಳ್ಳೆಯದನ್ನೂ ಕೆಟ್ಟದ್ದನ್ನೂ ವಿಂಗಡಿಸಿ ತಿಳಿಯುವುದು ಸುಲಭದ ಕೆಲಸ. ಉಪ್ಪುನೀರನ್ನು ಬಿಟ್ಟು ಸಿಹಿನೀರನ್ನು ಆಯುವುದಕ್ಕೆ ಹೆಚ್ಚು ಬುದ್ಧಿ ಏನೂ ಬೇಕಾಗಿಲ್ಲ. ಆದರೆ ಹತ್ತಾರು ಒಳ್ಳೆಯದು ಮುಂದೆ ಬಂದಾಗ, ಅದರಲ್ಲಿ ತುಂಬ ಒಳ್ಳೆಯದು ಯಾವುದೆಂದು ತಿಳಿಯಬೇಕಾದರೆ, ಅದಕ್ಕೆ ಬುದ್ಧಿಶಕ್ತಿ ತೀಕ್ಷ್ಣವಾಗಿರಬೇಕು. ಸಿಹಿನೀರು, ಕೇಸರಿ ಕಟ್ಟಿದ ನೀರು, ನಿಂಬೆಯ ಪಾನಕ, ಬಾದಾಮಿ ಹಾಲು, ಸೇವಿಗೆ ಕೀರು, ನೀರುಮಜ್ಜಿಗೆ ಸಾಲುಸಾಲಾಗಿ ತಂದಿಟ್ಟರೆ, ತಟಕ್ಕನೆ ಯಾವುದಾದರೂ ಒಂದಕ್ಕೆ ಕೈಹಾಕಿ ಗಟಗಟನೆ ಹುಯಿದುಕೊಳ್ಳುತ್ತೇವೆಯೇನು? ಆದ್ದರಿಂದಲೇ 'ಉತ್ತಿಷ್ಠತ. ಜಾಗ್ರತ. ಪ್ರಾಪ್ಯ ವರಾನ್ ನಿಬೋಧತ' ಎಂದು ಅನುಶಾಸನೆ ಮಾಡಿದಾಗ ಉತ್ತರಾರ್ಧವಾಗಿ ಹೇಳಿದರು:

**ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ**
**ದುರ್ಗಂ ಪಥಸ್ತತ್ ಕವಯೋ ವದನ್ತಿ**

ಹತ್ತು ಒಳ್ಳೆಯದರಲ್ಲಿ ತುಂಬ ಒಳ್ಳೆಯದು ಯಾವುದೆಂಬುದನ್ನು ತಿಳಿಯುವ ದಾರಿ ಕ್ಷೌರಕತ್ತಿಯ ಅಲಗಿನಂತೆ ಹರಿತವಾದುದು, ದಾಟಲು ಕಠಿನ, ನಡೆಯಲು ಕಷ್ಟ—ಎಂದು ತಿಳಿದಂಥವರು ಹೇಳುತ್ತಾರೆ.

ಈ ಮಾತು ಕಠೋಪನಿಷತ್ತಿನಲ್ಲಿ ಬರುತ್ತದೆ. ಅಲ್ಲಿ ಯಮನು ನಚಿಕೇತನಿಗೆ ಅಮೃತತ್ವದ ರಹಸ್ಯವನ್ನು ತಿಳಿಸುವಾಗ ಹೇಳುತ್ತಾನೆ:

ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತಃ
ತೌ ಸಂಪರೀತ್ಯ ವಿವಿನಕ್ತಿ ಧೀರಃ
ಶ್ರೇಯೋ ಹಿ ಧೀರೋಽಭಿಪ್ರೇಯಸೋ ವೃಣೀತೇ
ಪ್ರೇಯೋ ಮನ್ದೋ ಯೋಗಕ್ಷೇಮಾದ್ವೃಣೀತೇ

ಶ್ರೇಯಸ್ಸನ್ನು ಉಂಟುಮಾಡುವುದೂ ಪ್ರಿಯವನ್ನು ಉಂಟುಮಾಡುವುದೂ ಮನುಷ್ಯನ ಹತ್ತಿರಕ್ಕೆ ಬರುತ್ತವೆ. ಧೀರನಾದವನು ಅವು ಎರಡನ್ನೂ ಸುತ್ತಲೂ ಪರೀಕ್ಷಿಸಿ ವಿಂಗಡಿಸುತ್ತಾನೆ. ಧೀರನಾದವನು ಪ್ರಿಯವನ್ನು ಉಂಟುಮಾಡುವ ಅದಕ್ಕಿಂತ ಶ್ರೇಯಸ್ಸನ್ನು ಉಂಟುಮಾಡುವ ಅದನ್ನೇ ವರಿಸುತ್ತಾನೆ. ಮಂದಬುದ್ಧಿಯುಳ್ಳವನು 'ಕಂಡದ್ದನ್ನು ಕೊಳ್ಳಬೇಕು, ಕೊಂಡದ್ದನ್ನು ಕಟ್ಟಿಕೊಳ್ಳಬೇಕು' ಎಂದು ಪ್ರಿಯವಾದುದನ್ನು ವರಿಸುತ್ತಾನೆ.

ಇಲ್ಲಿ 'ಪ್ರಿಯವನ್ನು ಉಂಟುಮಾಡುವುದು' ಎಲ್ಲಾ ಒಳ್ಳೆಯ ವಸ್ತುಗಳು; 'ಶ್ರೇಯಸ್ಸನ್ನು ಉಂಟುಮಾಡುವುದು' ಆ ಒಳ್ಳೆಯವುಗಳಲ್ಲಿ ತುಂಬ ಒಳ್ಳೆಯದಾದದ್ದು.

ಈ 'ವಿವಿನಕ್ತಿ ಧೀರಃ' ಎಂದರಲ್ಲಾ, ಈ ವಿಂಗಡ ಮಾಡಬೇಕಾದರೆ, ಅದಕ್ಕೆ ತುಂಬ ಹರಿತವಾದ ಜ್ಞಾನ ಬೇಕು. ಜ್ಞಾನ ಅಷ್ಟು ಹರಿತವಾಗುವ ಹಾಗೆ ಮಾಡು ಎಂದು ದೈವವನ್ನು ಬೇಡುವುದೇ ಗಾಯತ್ರಿಯ ಉದ್ದೇಶ: 'ಧಿಯೋ ಯೋ ನಃ ಪ್ರಚೋದಯಾತ್.'

ಮನುಷ್ಯ ನಿಜವಾಗಿಯೂ ಬದುಕಬೇಕಾದರೆ ಹರಿತವಾಗಲೇ ಬೇಕಾದ ಈ ಜ್ಞಾನವನ್ನು ನಾಶಮಾಡಿಬಿಡಬೇಕೆಂದು ಒಳಗಡೆ ಅರಿಷಡ್ವರ್ಗಗಳು— ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು— ಸದಾ ಕಾದಿರುತ್ತವಂತೆ. ಇದನ್ನು ಸುಭಾಷಿತ ಹೀಗೆ ಹೇಳುತ್ತದೆ:

ಅಂತರ್ವಸನ್ತಿ ಷಟ್ಚೋರಾಃ ದುರ್ಜಯಾಃ ಲೋಕವಿಶ್ರುತಾಃ
ಜ್ಞಾನರತ್ನಾಪಹಾರಾಯ ತಸ್ಮಾತ್ ಜಾಗ್ರತ ಜಾಗ್ರತ

ಒಳಗಡೆ ಆರು ಮಂದಿ ಕಳ್ಳರು ವಾಸಮಾಡುತ್ತಿದ್ದಾರೆ. ಅವರನ್ನು

ಜಯಿಸುವುದು ಕಷ್ಟ. ಅವರು ಯಾರೆಂಬುದು ಲೋಕಕ್ಕೆಲ್ಲಾ ಚೆನ್ನಾಗಿ ಗೊತ್ತು. ಜ್ಞಾನವೆಂಬ ರತ್ನವನ್ನು ಕದ್ದೊಯ್ಯಬೇಕೆಂದು ಅವರು ಒಳಗೆ ಕಾದಿದ್ದಾರೆ. ಆದಕಾರಣ—ಎಚ್ಚತ್ತಿರು, ಎಚ್ಚತ್ತಿರು!

ಈ ಆರು ಕಳ್ಳರು ಜ್ಞಾನವನ್ನು ಅಪಹಾರಮಾಡದ ಹಾಗೆ ಎಚ್ಚರದಿಂದ ಇರುವುದೇ **'ಸಂಯಮ.'** ಸಂಯಮದ ಬೆಳೆಯೇ **'ಸಮವಾಯ'.** ಸಮವಾಯದ ಫಲವೇ **'ಸಾರವೃದ್ಧಿ'.**

ಈ 'ಸಾರವೃದ್ಧಿ' ಆಗಬೇಕಾದರೆ ನಮ್ಮಂತಹವರಿಗೆ ಯಾರಾದರೂ ಹೆಜ್ಜೆಹೆಜ್ಜೆಗೂ 'ಜಾಗ್ರತ! ಜಾಗ್ರತ!'ಎಂದು ಅಂಕುಶ ಹಾಕುತ್ತಿರಬೇಕು. ಗಾಂಧಿಯವರು ಬದುಕಿರುವಾಗ ಅವರು ಹಾಕುತ್ತಿದ್ದರು. ಆದರೆ ಈಗ, ಅವರು ಕಣ್ಮರೆಯಾಗಿರುವಾಗ? ಗಾಂಧಿಯವರು ಮರಣವಾದಾಗ ಶ್ರೀಮತಿ ಸರೋಜಿನೀ ದೇವಿಯವರು ಕೇಳಿದಂತೆ ಕೇಳಿಕೊಳ್ಳಬೇಕು:

> May the soul of my Master, my Leader, my Father, rest not in peace, not in peace. My father, do not rest. Do not rest. Keep us to our pledge. Give us the strength to fulfil our promise, your heirs, your descendants, your students, guardians of your dreams, fulfillers of India's destiny.

ಸೂರ್ಯದೇವನು ಮೂಡುವ ಸಂಧಿಕಾಲದಲ್ಲಿ, ಮಧ್ಯಾಹ್ನ ನಡುನೆತ್ತಿಗೆ ಬಂದಾಗ, ಮುಳುಗುವ ಇನ್ನೊಂದು ಸಂಧಿಕಾಲದಲ್ಲಿ ಗಾಯತ್ರಿಯನ್ನು ಜಪಿಸಿ, ಆತನು ನಮ್ಮ ಬದುಕನ್ನು ತಿದ್ದಲಿ ಎಂದು ಬೇಡಿಕೊಳ್ಳುತ್ತೇವೆ. ಅದರಂತೆಯೇ, ನಮಗೆ ಸೂರ್ಯನ ಹಾಗಿದ್ದ ಗಾಂಧಿಯವರ ಈ ಹುಟ್ಟಿದ ಹೊತ್ತಿನಲ್ಲಿ, ಮತ್ತೆ ಆ ಮರಣದ ದಿವಸದಲ್ಲಿ, ಅಲ್ಲದೆ ಈ ಎರಡರ ನಡುವೆ ಅನುದಿನವೂ "ಸಂಯಮ ಸಮವಾಯ ಸಾರವೃದ್ಧಿಗಳನ್ನು ಸಾಧಿಸಲು ಹೊರಟ ನಮ್ಮ ನಡೆ ನೇರವಾಗಿ ಇರುವ ಹಾಗೆ ನೀವು ತಿದ್ದಿರಿ" ಎಂದು ಅವರನ್ನು ಬೇಡಿಕೊಳ್ಳೋಣ.

---

ಬಿ. ಬಿ. ಡಿ. ಪವರ್ ಪ್ರೆಸ್, ಅರಳೇಪೇಟೆ, ಬೆಂಗಳೂರು ಸಿಟಿ.